# ಜನಪದ ನಂಬಿಕೆಗಳು

ಡಾ. ಮಂಜುನಾಥ ಬೇವಿನಕಟ್ಟಿ

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

JANAPADA NAMBIKEGALU By: Dr. Manjunatha Bevinakatti, Reader, Dept. of Folklore Studies, Kannada University, Hampi. Published by The Director of Prasaranga. Kannada University, Kamalapura - 583 221 First Edition 1996, Pp IV+23. Rs. 2-00

ಮಂಟಪ ಮಾಲೆ ೨೪



ಪ್ರಕಾಶಕರು
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

ಬೆಲೆ ರೂ. ೨.೦೦

ಡಿ.ಟಿ.ಪಿ. ಸಂಯೋಜನೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮುದ್ರಣ
ಅಪೂರ್ವ ಆಫ್‌ಸೆಟ್ ಪ್ರಿಂಟರ್ಸ್
ಸಚ್ಚಿದಾನಂದ ಲೇನ್
ಹೊಸಪೇಟೆ

# ಜನಪದ ನಂಬಿಕೆಗಳು

'ರಾತ್ರಿ ವೇಳೆ ಕಸಗುಡಿಸಿ ಹೊರಗೆ ಹಾಕಬಾರದು', 'ಹಿಮ್ಮಡಿ ತೊಳೆಯದೆ ಒಳಗೆ ಬರಬಾರದು', 'ದೇವರ ಮೇಲಿನ ಹೂ ಬಲಕ್ಕೆ ಬಿದ್ದರೆ ಒಳ್ಳೆಯದು,ಎಡಕ್ಕೆ ಬಿದ್ದರೆ ಕೆಟ್ಟದ್ದು', 'ಆರು ಬೆರಳಿದ್ದರೆ ಪುಣ್ಯವಂತರು', 'ಮೂರು ಹೆಣ್ಣಿನ ಹಿಂದೆ ಒಂದು ಗಂಡು ಹುಟ್ಟಿದರೆ ಮನೆಗೆ ದೆಸೆ', 'ಗುಬ್ಬಿ ಮಣ್ಣಿನ ಸ್ನಾನ ಮಾಡಿದರೆ ಮಳೆ ಬರುತ್ತದೆ', 'ಮದುವೆಯಲ್ಲಿ ಬಾಸಿಂಗ ಮುರಿದರೆ ಅಪಶಕುನ', 'ಪಿತೃ ಪಕ್ಷದ ದಿನ ರಂಗೋಲಿ ಬಿಡಬಾರದು', 'ಕಾಶಿಯಲ್ಲಿ ಸತ್ತರೆ ನೆಟ್ಟಗೆ ಸ್ವರ್ಗಕ್ಕೆ ಹೋಗುತ್ತಾರೆ', ಹೀಗೆ ದಿನಂಪ್ರತಿ ನಾವುಗಳು ನಮ್ಮ ಮನೆಗಳಲ್ಲಿ ಹಲವಾರು ನಂಬಿಕೆಗಳನ್ನು ಇಟ್ಟುಕೊಂಡು ಬದುಕುತ್ತಿದ್ದೇವೆ. ಈ ನಂಬಿಕೆಗಳು ಬದುಕಬೇಕೆಂಬ ಆಶೆಯಿಂದ ಹುಟ್ಟುತ್ತವೆ. ಬದುಕುವ ನಂಬಿಕೆಯೇ ಮಾನವ ಸಮಾಜದ ಆರಂಭಕ್ಕೆ ಕಾರಣ ಅಂದರೆ ಮಾನವ ಸಮಾಜದ ಅಸ್ತಿತ್ವಕ್ಕೆ ಈ ನಂಬಿಕೆ ಮೂಲವಸ್ತು.

ಮಾನವ ಸಮಾಜದ ಅಸ್ತಿತ್ವಕ್ಕೆ ಕಾರಣವಾದ ನಂಬಿಕೆಗಳು ಒಂದು ಕಡೆ ನೆಲೆ ನಿಲ್ಲಬೇಕು. ಹೀಗೆ ನಂಬಿಕೆ ನೆಲೆ ನಿಂತಾಗಲೇ ಸಮಾಜ ಮೌಲ್ಯವೆಂದು ಒಪ್ಪುತ್ತದೆ. ತಾನು ನೆಲೆ ನಿಂತು ಬದುಕುವ ಕಾರಣಕ್ಕಾಗಿ ಮಾನವ ಸಮಾಜವನ್ನು ಕಟ್ಟಿಕೊಳ್ಳಬಯಸುತ್ತಾನೆ. ಅದಕ್ಕಾಗಿ ಒಂದು ಸ್ಥಳ ಅಥವಾ ಪ್ರದೇಶದಲ್ಲಿ ನೆಲೆ ನಿಲ್ಲುತ್ತಾನೆ. ಅಲ್ಲಿ ಅವನಿಗೆ ನಾನು, ನನ್ನದು, ನನ್ನ ಬಳಗ, ನನ್ನ ಜನರು ಮತ್ತು

ನನ್ನ ಸಮಾಜ ಎಂಬ ನಂಬಿಕೆ ಹುಟ್ಟಿಕೊಳ್ಳುತ್ತದೆ. ಇದು ವ್ಯಕ್ತಿ ಭದ್ರವಾಗಿ ನಿಲ್ಲಲೂ ಬೇಕಾಗುತ್ತದೆ. ಹಾಗೆ ಹೊರಗಿನ ಶತ್ರುವಿನಿಂದ ರಕ್ಷಣೆ ಪಡೆಯಲೂ ಬೇಕಾಗುತ್ತದೆ. ಅಂದರೆ ಅವನನ್ನು ನೆಲೆ ನಿಲ್ಲಿಸಿದ ನಂಬಿಕೆ ಅವನಿಗೊಂದು ರಕ್ಷಣೆ ಕೊಡುತ್ತದೆ. ಈ ಕಾರಣಕ್ಕಾಗಿ ಅವನು ತನ್ನ ನೆಲೆನಿಲ್ಲಲು ಮತ್ತು ರಕ್ಷಿಸಿಕೊಳ್ಳಲು ಬೇಕಾಗುವ ನೆಲೆನಿಲ್ಲುವ ನಂಬಿಕೆ ಆಚರಣೆಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ರಕ್ಷಣೆಗಾಗಿ ಮಾಟ,ಮಂತ್ರ,ನಿಷೇಧ ಮುಂತಾದವುಗಳನ್ನು ಸೃಷ್ಟಿಸಿಕೊಳ್ಳುತ್ತಾನೆ. ಹೀಗೆ ಮಾನವ ಬದುಕಿನ ಸ್ಥಾಪನೆ ನಂಬಿಕೆಯಲ್ಲಿದೆ. ಇದೇ ಸ್ಥಾಪನಾ ಆಕಾಂಕ್ಷೆ ಭೂಮಿಯ ಆಚೆಗೆ ಆಕಾಶಕ್ಕೂ, ಭೂಮಿಯ ಕೆಳಗೆ ಪಾತಾಳಕ್ಕೂ ಇಳಿಯುತ್ತದೆ. ಬದುಕುವ ನಂಬಿಕೆ ಸ್ವರ್ಗ ನರಕಗಳನ್ನು ಸೃಷ್ಟಿಸುತ್ತದೆ. ಅಂದರೆ ನಂಬಿಕೆ ಮಾನವನ ಬದುಕಿನಲ್ಲಿ ಮೂಲದ್ರವ್ಯವಾಗಿದೆ.

ಮಾನವ ತನ್ನ ಉಳಿವಿಗಾಗಿ ಕೆಲವೊಂದು ನಂಬಿಕೆಗಳನ್ನು ತಂದಿದ್ದಾನೆ. ಹೀಗೆ ತರುವುದು ಮಾನವ ಸ್ವಭಾವವಷ್ಟೇ ಅಲ್ಲದೆ, ಆತನ ಸಂಸ್ಕೃತಿಯ ಸ್ವಭಾವವೂ ಆಗಿದೆ. ಪುರಾತನ ಕಾಲದಿಂದ ಮಾನವನ ನಾಗರಿಕತೆ, ಪ್ರೌಢಜ್ಞಾನ ಮತ್ತು ಸಂಸ್ಕೃತಿಯ ಹಂತವನ್ನು ಮುಟ್ಟುವವರೆಗೆ ಮಾನವನ ಅವಿರತ ಮುನ್ನಡೆಯ ಹಾದಿಯಲ್ಲಿ ನಂಬಿಕೆ ಬಹುಕಾಲದಿಂದಲೂ ಬೆಳೆದು ಬಂದಿದೆ. ಸಮಾಜದ ಕೆಳಗಿನ ಸ್ತರದಿಂದ ಮೇಲ್ತರಗತಿಯವರೆಗೆ ಅಸಂಸ್ಕೃತರಿಂದ ಸುಸಂಸ್ಕೃತರವರೆಗೆ ವಿದ್ಯಾವಂತರಿಂದ ಅವಿದ್ಯಾವಂತ ವರ್ಗದವರೆಗೆ ಎಲ್ಲಾ ಬಗೆಯ ಜನರಲ್ಲೂ ನಂಬಿಕೆಗಳು ಸದಾ ನಂದದಂತೆ ಉಳಿದುಬರುತ್ತವೆ. ವ್ಯಕ್ತಿಯ ಮನೋಭಾವ ಹೇಗಿರುತ್ತದೆಯೋ ಹಾಗೆಯೇ ನಂಬಿಕೆಗಳು ಜನತೆಯಲ್ಲಿ ಪ್ರಭಾವ ಬೀರಬಲ್ಲವು. ಅಲ್ಲದೆ ನಂಬಿಕೆಗಳು ಜನತೆಯ ಜೀವನವನ್ನು ನೇರವಾಗಿ ಚಿತ್ರಿಸುತ್ತವೆ. ಹಾಗಾಗಿ ಜೀವನಕ್ಕೂ ನಂಬಿಕೆಗೂ ನಿಕಟವಾದ ಸಂಬಂಧವಿದ್ದು, ಅವೆರಡೂ ಹಾಸು ಹೊಕ್ಕಾಗಿ ಸೇರಿಕೊಂಡಿರುವುದರ ಜೊತೆಗೆ, ಮಾನವ ಜೀವನದ ಪ್ರತಿಯೊಂದು ಕ್ಷೇತ್ರದಲ್ಲೂ ವಿಜೃಂಭಿಸಿವೆ. ಹಾಗೂ ಪ್ರತಿ ಸಮಾಜವು ಅನಾದಿಕಾಲದಿಂದ ತನ್ನದೇ ಆದ ನಂಬಿಕೆಗಳನ್ನು ಆಚರಣೆಯಲ್ಲಿಟ್ಟುಕೊಂಡು ಬಂದಿದೆ. ಕಾಲ ದೇಶಗಳಿಗೆ ಅನುಗುಣವಾಗಿ ಇವು ಬದಲಾಗುತ್ತಲೂ ಇರುತ್ತವೆ.

ನಂಬಿಕೆಯು ಅಭಯ ಅಥವಾ ನೆಚ್ಚಿಕೆಯ ಒಂದು ಮಾನಸಿಕ ಸ್ಥಿತಿ. ಇದು ಸಾಂಪ್ರದಾಯಿಕವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆಯಾಗಿದ್ದು, ಸಾಮಾನ್ಯವಾಗಿ ಅದು ಕಾರಣ ಮತ್ತು ಪರಿಣಾಮದ ಸಂಬಂಧವನ್ನು ಹಾಗೂ ಭೂತ, ವರ್ತಮಾನ ಮತ್ತು ಭವಿಷತ್ತಿನ ಸಂಗತಿಗಳನ್ನು ಒಳಗೊಂಡಿರುತ್ತದೆ. ಮನಸ್ಸು ಅನುಭವಗಳ

ಮೂಲಕ ಬೆಳೆಯುತ್ತಾ, ಹಲವಾರು ನಂಬಿಕೆಗಳನ್ನು ಸಂಪಾದಿಸಿಕೊಳ್ಳುತ್ತಾ ಅವುಗಳಿಗೆ ಲೌಕಿಕವಾಗಿಯೋ, ಅಲೌಕಿಕವಾಗಿಯೋ ಒಂದು ವ್ಯವಸ್ಥಿತ ರೂಪ ಕೊಡುತ್ತಾ ಹೋಗುತ್ತದೆ. ಇಂತಹ ನಂಬಿಕೆಗಳು ವ್ಯಕ್ತಿಯ ಜೀವನದಲ್ಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಕೆಲವು ಸಾರಿ ವ್ಯಕ್ತಿಯ ಬದುಕಿನಲ್ಲಿ ಶ್ರದ್ಧೆಯನ್ನುಂಟು ಮಾಡುತ್ತವೆ. ಇವುಗಳು ವ್ಯಕ್ತಿಯ ಮನಸ್ಸಿನ ಮೇಲೆ ಪ್ರಭಾವವುಂಟು ಮಾಡಿ ಆ ಮೂಲಕ ವ್ಯಕ್ತಿ ಕಾರ್ಯೋನ್ಮುಖವಾಗುವಂತೆ ಪ್ರೇರೇಪಿಸುತ್ತವೆ. ಇಂತಹ ನಂಬಿಕೆಗಳು ಕೆಲವು ಸಾರಿ ವ್ಯಕ್ತಿಯ ಮುನ್ನಡೆಗೆ ತೊಡಕೂ ಆಗಬಹುದು. ನಂಬಿಕೆಗಳನ್ನು ನಾವು ನೋಡಿದಾಗ ಒಂದು ರೀತಿಯಲ್ಲಿ ದೈನಂದಿನ ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಬಳಸುವ ವಿಧಾನಗಳಂತಿರುತ್ತವೆ. ಪ್ರತಿಯೊಂದು ಕೆಲಸಕಾರ್ಯ, ಆಲೋಚನೆ, ರೂಢಿ, ಸಂಪ್ರದಾಯ ಜೀವನಕ್ರಮಗಳೆಲ್ಲವೂ ನಂಬಿಕೆಗಳಿಂದ ಆಧಾರ ಪಡೆದಿವೆ.

**೧. ೧ : ನಿರೂಪಣೆಗಳು**

ನಂಬಿಕೆ ಎಂಬ ಪದವನ್ನು ವಿದ್ವಾಂಸರು ವಿವರಿಸುವಾಗ ಕೆಲವು ವಿವರಣೆಗಳು ಮನುಷ್ಯನ ಮಾನಸಿಕ ಪರಿಣಾಮಗಳನ್ನು ಗುರುತಿಸಿದ್ದರೆ, ಮತ್ತೆ ಕೆಲವು ಬೌದ್ಧಿಕತೆಗೆ ಒತ್ತುಕೊಟ್ಟಿವೆ. ಇನ್ನೂ ಕೆಲವು ವಿವರಣೆಗಳು ಮನುಷ್ಯನ ಗ್ರಹಿಕೆಯ ಶಕ್ತಿಗೆ ಒತ್ತು ಕೊಟ್ಟಿವೆ. ಬೇರೆ ಬೇರೆ ವಿದ್ವಾಂಸರು ಬೇರೆ ಬೇರೆ ರೀತಿಯಲ್ಲಿ ನಂಬಿಕೆಯನ್ನು ವಿವರಿಸಿದ್ದಾರೆ. ಅವರ ನಿರೂಪಣೆಗಳು ಈ ರೀತಿಯಲ್ಲಿವೆ.

**ಹ್ಯೂಮ್**

ಮನುಷ್ಯನಿಗೆ ವಿಚಾರ ಮಾಡುವ ಶಕ್ತಿ ಇದ್ದುದರಿಂದ ಅವನು ಹೊಸ ಹೊಸ ಕಲ್ಪನೆಗಳನ್ನು ಹೆಣೆಯುತ್ತಾನೆ. ಭಾವನೆಗಳನ್ನು ಹೊಸೆಯುತ್ತಾನೆ. ಅವು ಆತನ ಭಾಷೆ ಅಭಿವ್ಯಕ್ತಿಗೊಂಡಾಗ ಸಹಜವಾಗಿ ಹೊರ ಬೀಳುತ್ತವೆ. ಇಂಥ ವಿಶಿಷ್ಟ ರೀತಿಯ ಭಾವನೆಗಳೇ ಜನಪದ ನಂಬಿಕೆಗಳು.

**ರಾಗೌ ಮತ್ತು ವಸಂತಕುಮಾರ ಎಂ.ಪಿ**

ನಂಬಿಕೆ ಅಥವಾ ನೆಚ್ಚಿಕೆಯು ಒಂದು ಮಾನಸಿಕ ಸ್ಥಿತಿ, ಪರಂಪರಾಗತವಾಗಿ ಸ್ವೀಕೃತವಾದ ಒಂದು ಭಾವ ರೂಪ, ಪುನರಾವರ್ತಿತ ಹಾಗೂ ಸಾಂಪ್ರದಾಯಿಕ ಅಭಿಪ್ರಾಯೋಕ್ತಿ, ವಸ್ತುಸ್ಥಿತಿಯೊಡನೆ ಅವೈಜ್ಞಾನಿಕವಾದ ಸಂಬಂಧವುಳ್ಳ ಹೇಳಿಕೆ. ಇದರಲ್ಲಿ ಮಾತು ಒಂದು ಭಾಗ. ಕ್ರಿಯೆ ಮತ್ತೊಂದು ಭಾಗ. ಇವುಗಳು ಅವರ ವಿಚಿತ್ರಮಯ ಜೀವನಕ್ಕೆ ಬರೆದಿಟ್ಟ, ಸಚಿತ್ರ ಶಾಸನಗಳಾಗಿವೆ.

**ಕನ್ನಡ ವಿಶ್ವಕೋಶದ ಪ್ರಕಾರ**

ಸಾಮಾನ್ಯವಾಗಿ ಯಾವುದಾದರು ಪ್ರಮೇಯ, ಹೇಳಿಕೆ ಅಥವಾ ಸತ್ಯಾಂಶವನ್ನು ನಿಜವೆಂದು ಭಾವಿಸಿ ಸ್ವೀಕರಿಸುವುದು ನಂಬಿಕೆ. ಇದು ವ್ಯಕ್ತಿ ಅಥವಾ ತತ್ವದ ಸ್ವೀಕಾರಕ್ಕೂ ಅನ್ವಯಿಸುತ್ತದೆ.

According to standard Dictionary of F olklore, Mythology and Legend Vol II: Traditionally accepted concept, often of a cause and effect relationship, part, present or future accepted as a result of repeated and collective observation of finally of faith.

ಮೇಲಿನ ವಿವರಣೆಗಳನ್ನು ಗಮನಿಸಿದಾಗ, ಮೊದಲನೆಯದಾಗಿ ನಂಬಿಕೆಯು ಒಂದು ಮಾನಸಿಕ ಒಪ್ಪಿಗೆಯಾಗಿದ್ದು, ಅದನ್ನು ಪರಂಪರಾನುಗತವಾಗಿ ನಂಬಿ, ಅದರಂತೆ ನಡೆದುಕೊಂಡು ಬಂದಿರುವ ಭಾವರೂಪ. ಇದು ಸೂಚನೆ, ಆದೇಶ, ನಿರ್ದೇಶನ, ಆಗ್ರಹ ಮತ್ತು ನಿಷೇಧ ರೂಪದ ಒಂದು ಹೇಳಿಕೆ. ನಂಬಿಕೆಗಳಿಂದ ಕ್ರಿಯೆಗಿಳಿದ ಜನರು ಒಬ್ಬರಿಂದ ಇನ್ನೊಬ್ಬರಲ್ಲಿ, ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಕೇಳಿ ನಡೆಯಲ್ಲಿ ತಂದರು. ಮುಂದಿನವರೂ ಮತ್ತೊಬ್ಬರೂ ಅವುಗಳನ್ನು ಕಣ್ಣಾರೆ ಕಂಡು ಸುಖದ ಆಸೆ ತಾಳಿಯೋ, ಮನಸ್ಸಿನ ಸಮಾಧಾನಕ್ಕೋ ಅನುಸರಿಸಿದರು.

ಎರಡನೆಯದಾಗಿ ನಂಬಿಕೆಯು ಒಂದು ರೀತಿಯಲ್ಲಿ ಸೂಚನೆ, ನಿಯಮ, ನಿಷೇದ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದ ಒಂದು ಹೇಳಿಕೆಯಾಗಿದೆ. ಈ ಹೇಳಿಕೆಯನ್ನು ಜನರು ಅನುಸರಿಸುತ್ತಾರೆ ಮತ್ತು ಹಾಗೆ ನಡೆದುಕೊಳ್ಳುತ್ತಾರೆ. ಅವರ ಈ ನಡವಳಿಕೆಯು ಪ್ರಜ್ಞಾಪೂರ್ವಕವಾಗಿರಬಹುದು ಅಥವಾ ಅಪ್ರಜ್ಞಾಪೂರ್ವಕವಾಗಿರಬಹುದು. ಅದು ಧೋರಣೆ ಮತ್ತು ವಿಶ್ವಾಸಕ್ಕೆ ಸಂಬಂಧಿಸಿದ್ದು.

ಮೂರನೆಯದಾಗಿ ನಂಬಿಕೆ ನಿಜವಾಗಿರಬಹುದು ಅಥವಾ ಸುಳ್ಳಾಗಿರಬಹುದು ಅದು ನಂಬುವವರನ್ನು ಆಧರಿಸಿದ ಕಲ್ಪನೆ. ಇದು ಮನಸ್ಸಿನ ಒಂದು ಭಾವನೆಯಾಗಿದೆ. ಅಂದರೆ ನಂಬಿಕೆಯನ್ನು ನಂಬಿ ಅದರ ಹಾಗೆ ನಡೆದುಕೊಳ್ಳುವವರ ವರ್ತನೆಯಾಗಿದೆ. ನಂಬಿಕೆ ಜ್ಞಾನಕ್ಕಿಂತ ಭಿನ್ನವಾಗಿದೆ. ಇದನ್ನು ಮಾನವ ಜೀವನದ ಸರ್ವಕ್ಷೇತ್ರಗಳಲ್ಲಿ ಕಾಣಬಹುದು. ಒಬ್ಬ ವ್ಯಕ್ತಿಯ ಮನೋಭಾವಕ್ಕೆ ಒಪ್ಪಿಗೆಯಾಗುವಂಥ ವಿಷಯ. ಒಂದು ರೀತಿಯ ಆತ್ಮ ವಿಶ್ಲೇಷಣೆ. ಬುದ್ಧಿ ಪೂರ್ವಕವಾದ ಕ್ರಿಯೆ. ವ್ಯಕ್ತಿಯ

ಅನುಭವಗಳ ವಾಸ್ತವಿಕತೆ ಮತ್ತು ಮೌಲ್ಯಗಳ ಇಲ್ಲವೆ ಧ್ಯೇಯ ಧೋರಣೆಗಳ ಒಂದು ಮಾನಸಿಕ ಸ್ಥಿತಿ ಎಂದೂ, ಒಂದು ಹೇಳಿಕೆಯ ಸತ್ಯಾಂಶದ ಬಗ್ಗೆ ಒಬ್ಬ ವ್ಯಕ್ತಿ ತಾಳುವ ಬುದ್ಧಿಯ ಕಸರತ್ತು ಎಂದೂ ನಂಬಿಕೆಯ ಬಗ್ಗೆ ವಿಶ್ಲೇಷಿಸಬಹುದು.

ನಂಬಿಕೆಗಳು ಭಯ ಮತ್ತು ಭಾವಾತ್ಮಕತೆಯ ಹಿನ್ನೆಲೆಯಲ್ಲಿ ಬಂದಿರಬಹುದು. ಎಂದೋ ನಡೆದ ಘಟನೆಗಳಾಗಿರಬಹುದು. ಕಲ್ಪನೆಯ ಕಥೆಗಳ ಮೇಲೆ ಹುಟ್ಟಿರಬಹುದು. ನೈಸರ್ಗಿಕ ಚೇಷ್ಟೆಗಳ ಬಗೆಗೆ ತಳೆದ ಮನೋಭಾವವಾಗಿರಬಹುದು. ಘಟನೆಗಳ ಪುನರಾವರ್ತನೆಯಿಂದಾಗಿರಬಹುದು. ಕನಸುಗಳಿಂದ ಹುಟ್ಟಿರಬಹುದು. ಮೊದಲೇ ಚಾಲ್ತಿಯಲ್ಲಿರುವ ಮೂಲ ನಂಬಿಕೆಗಳ ಆಧಾರದ ಮೇಲೆ ಅನುಮಾನ ಪ್ರಮಾಣದ ಮೂಲಕ ಬೇರೆ ಬೇರೆ ಕೆಲವು ನಂಬಿಕೆಗಳು ಹುಟ್ಟಿರಬಹುದು. ಕಾಕತಾಳಿಯ ನ್ಯಾಯ ಸಹ ಕಾರಣವಾಗಿರಬಹುದು. ಇದರ ಜೊತೆ ಭಯ, ಭರವಸೆ, ಪೂರ್ವಾಗ್ರಹ, ಭಾವೋದ್ರೇಕ, ಅನುಕರಣೆ, ಜಾತಿ ಅಥವಾ ವರ್ಗದ ಒತ್ತಾಯದ ಭಾಗವಹಿಸುವಿಕೆಯ ಮುಖಾಂತರ, ಹೀಗೆ ಹಲವಾರು ಕಾರಣಗಳಿಂದ ನಂಬಿಕೆಗಳು ಹುಟ್ಟಬಹುದು.

### ೧. ೨ : ನಂಬಿಕೆಗಳ ಗುಣ ಲಕ್ಷಣಗಳು

ಪ್ರತಿಯೊಂದು ಸಮಾಜವು ಅನಾದಿಕಾಲದಿಂದ ತನ್ನದೇ ಆದ ನಂಬಿಕೆಗಳನ್ನು ಆಚರಣೆಯಲ್ಲಿಟ್ಟುಕೊಂಡು ಬಂದಿದೆ. ಕಾಲ ದೇಶಗಳಿಗೆ ಅನುಗುಣವಾಗಿ ಇವು ಬದಲಾಗುತ್ತಲೂ ಇರುತ್ತವೆ. ಅಂದರೆ ನಂಬಿಕೆಗಳ ಹುಟ್ಟು ಮತ್ತು ಸಾವನ್ನು ತೀರ್ಮಾನಿಸುವುದು ಕಾಲ. ಒಂಟಿ ಮನುಷ್ಯನಲ್ಲ. ಒಂದು ಕಾಲಕ್ಕೆ ಬೇಕಾದ ನಂಬಿಕೆ ಮತ್ತೊಂದು ಕಾಲಕ್ಕೆ ಬೇಕಾಗದಿದ್ದಾಗ ಆ ಕಾಲ ನಿರ್ದಾಕ್ಷಿಣ್ಯವಾಗಿ ಬೇಡವಾದ ನಂಬಿಕೆಗಳನ್ನು ತೆಗೆದುಹಾಕುತ್ತದೆ ಮತ್ತು ತನ್ನ ಕಾಲಕ್ಕೆ ಬೇಕಾದ ನಂಬಿಕೆಗಳನ್ನು ಸೃಷ್ಟಿಸಿಕೊಳ್ಳುತ್ತಾ ಹೋಗುತ್ತದೆ. ಈ ರೀತಿಯಾಗಿರುವ ನಂಬಿಕೆಗಳು ತಮ್ಮದೇ ಆದ ಗುಣಲಕ್ಷಣಗಳನ್ನು ಹೊಂದಿವೆ. ಅವುಗಳೆಂದರೆ,

#### ೧. ೨. ೧ : ಮನಶಾಸ್ತ್ರೀಯ ಗುಣ

ನಂಬಿಕೆಯು ಅನೇಕ ಮಾನಸಿಕ ಅಂಶಗಳನ್ನು ಅವಲಂಬಿಸಿರುತ್ತದೆ. ಇಂತಹ ಮಾನಸಿಕ ಭಾವನೆಯ ಪ್ರಕ್ರಿಯೆಯಿಂದ ಹಲವು ಬಗೆಯ ನಂಬಿಕೆಗಳು ನಮ್ಮ ರೂಢಿ ಸಂಪ್ರದಾಯಗಳಲ್ಲಿ ಬೇರೂರಿಬಿಟ್ಟಿವೆ. ಯಾವುದೇ ಒಬ್ಬವ್ಯಕ್ತಿ ಹೇಳಿದ ನಂಬಿಕೆಯನ್ನು ಒಪ್ಪಿಕೊಳ್ಳುವ ಪ್ರಕ್ರಿಯೆಯಲ್ಲಿ ಮನಸ್ಸು ಮುಖ್ಯವಾದುದು. ಅಲ್ಲದೆ ಇದು ಭಾವಾತ್ಮಕ ಅನುಭವದೊಡನೆ ನಿಕಟವಾದ ಸಂಬಂಧವನ್ನು ಹೊಂದಿರುವಂತೆ

ಕಾಣುತ್ತದೆ. ವ್ಯಕ್ತಿಯ ಆಂತರಿಕ ಸ್ಥಿರತೆಯನ್ನು ಅವಲಂಬಿಸಿಯೇ ಅವನ ಆನಂದದಾಯಕ ಭಾವನಾ ಪರಿಸ್ಥಿತಿ ರೂಪಿತವಾಗುವುದು. ಇದು ಕಷ್ಟಗಳ ನಿವಾರಣೆಯಿಂದ ಅಡಚಣೆಗಳ ನಾಶದಿಂದ ಮತ್ತು ಪರಸ್ಪರ ವಿರುದ್ಧಾಂಶಗಳ ಸಾಂಗತ್ಯದಿಂದ ಬರುತ್ತದೆ. ಇಂತಹ ಶಾಂತಿದಾಯಕ ಸಾಂಗತ್ಯವನ್ನು ನಂಬಿಕೆಗಳು ತರುತ್ತವೆ.

### ೧. ೨. ೨: ವಾಸ್ತವತೆಯ ಅರಿವು

ನಂಬಿಕೆಯನ್ನು ವಾಸ್ತವಿಕತೆಯಿಂದ ಬೇರ್ಪಡಿಸುವುದು ಸುಲಭವಲ್ಲ. ನಂಬಿಕೆ ಮತ್ತು ವಾಸ್ತವಿಕತೆ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ವಾಸ್ತವಿಕತೆಯೂ ಸಹ ಪ್ರಜ್ಞೆಯ ಒಂದು ಸ್ವರೂಪ. ಅದರಲ್ಲಿ ಒಂದು ವಿಧವಾದ ಸ್ಪರ್ಧೆಯಾಗಲೀ ಗೊಂದಲವಾಗಲೀ ಇರುವುದಿಲ್ಲ. ಪ್ರತಿಯೊಂದು ಅನುಭವವೂ ತನ್ನದೇ ಆದ ಸ್ಥಾನ ಪಡೆದಿದೆ.ಹಾಗೆಯೇ ಪ್ರತಿಯೊಂದು ನಂಬಿಕೆಗೂ ತನ್ನದೇ ಆದ ಸ್ಥಾನವಿದೆ. ವಾಸ್ತವಾನುಭವವು ನಮ್ಮನ್ನು ಒಂದು ತೀರ್ಪಿಗೆ ಎಳೆದೊಯ್ಯುತ್ತದೆ. ಈ ಕ್ರಿಯೆ ನಡೆಯುವಾಗ ಒಂದರಿಂದ ಮತ್ತೊಂದನ್ನು ಬೇರ್ಪಡಿಸುವ ಹಾಗೂ ಒಪ್ಪಿತವಾದುದನ್ನು ಆರಿಸಿಕೊಳ್ಳುವ ಕ್ರಮವನ್ನು ಅನುಸರಿಸಲಾಗುತ್ತದೆ. ಈ ಬಗೆಯ ತೀರ್ಪು ವ್ಯಕ್ತಿಗತವಾಗಿರುತ್ತದೆ. ತೀರ್ಪಿನೆಡೆಗೆ ಕೊಂಡೊಯ್ಯುವ ವಾಸ್ತವಿಕಾನುಭವದ ಅರಿವೇ ಒಂದು ರೀತಿಯಲ್ಲಿ ನಂಬಿಕೆ ಎನ್ನಬಹುದು.

### ೧. ೨. ೩: ಸಾಂಸ್ಕೃತಿಕ ಅಭಿವ್ಯಕ್ತಿ

ವಾಸ್ತವಿಕವಾಗಿ ಸಂಸ್ಕೃತಿಯಿಂದ ನಂಬಿಕೆಗಳನ್ನು ಬೇರ್ಪಡಿಸಿಕೊಂಡು ನೋಡುವುದು ಕಷ್ಟ. ಸಂಸ್ಕೃತಿ ರೂಪಧಾರಣೆ ಹೊಂದುವ ಪ್ರಾಥಮಿಕ ಸ್ಥಿತಿಯಲ್ಲಿಯೇ ಹಲವು ನಂಬಿಕೆಗಳು ಅಲ್ಲಿ ನಿಯಮಗಳೆಂಬಂತೆ ಸ್ಥಾನ ಪಡೆದಿವೆ. ಸಂಸ್ಕೃತಿಯು ತಾನು ಉತ್ತಮಗೊಳ್ಳಲು ಪ್ರಯತ್ನಿಸಿದಂತೆಲ್ಲಾ ತನ್ನ ಸಂಸ್ಕೃತಿಯನ್ನು ತನ್ನದೇ ಆದ ರೀತಿಯಲ್ಲಿ ಕಟ್ಟಲು ಯೋಚಿಸಿದಂತೆಲ್ಲಾ ಈ ಬಗೆಯ ಹಲವು ನಂಬಿಕೆಗಳು ಹುಟ್ಟಿಕೊಂಡಿರಬೇಕು. ಸಂಸ್ಕೃತಿಯ ಒಂದು ಅಂಗವಾಗಿ ನಂಬಿಕೆಗಳು ಹುಟ್ಟುತ್ತವೆ. ನಂಬಿಕೆಗಳು ಆಯಾ ಸಂಸ್ಕೃತಿಯ ಮೌಲ್ಯ, ನೈತಿಕತೆ, ಆದರ್ಶ, ಆಸಕ್ತಿ, ನಿಷ್ಠೆ, ಪೌರಾಣಿಕ ಕಲ್ಪನೆಯ ಅಭಿವ್ಯಕ್ತಿಗಳಾಗಿರಬಹುದು. ಉದಾಹರಣೆಗೆ ಮಕ್ಕಳಿರುವ ಮನೆಗೆ ಬರಿಕೈಯಲ್ಲಿ ಹೋಗಬಾರದು, ಬೋಡಮ್ಮ ಎದುರಾದರೆ ಅಪಶಕುನ ಮುಂತಾದವು.

### ೧. ೨. ೪: ಸಾರ್ವತ್ರಿಕತೆ ಮತ್ತು ಪ್ರಾದೇಶಿಕತೆಯ ಹಿನ್ನಲೆ

ನಂಬಿಕೆಗಳನ್ನು ಪ್ರಪಂಚದಲ್ಲಿರುವ ಎಲ್ಲಾ ಸಂಸ್ಕೃತಿಯಲ್ಲೂ ಕಾಣಬಹುದು. ಪ್ರಪಂಚದಲ್ಲಿರುವ ನಂಬಿಕೆಗಳಲ್ಲಿ ಬಹುಪಾಲು ವಿಶ್ವಜನೀನವಾದವು. ಕೋಟೆ ಅಥವಾ ಯಾವುದಾದರೂ ಕಟ್ಟಡ ಭದ್ರವಾಗಿರಬೇಕಾದರೆ ಹಸುಗೂಸನ್ನು ಬಲಿ ಕೊಡುತ್ತಾರೆಂಬ ನಂಬಿಕೆ ಜಗತ್ತಿನಲ್ಲೆಲ್ಲಾ ಹರಡಿದೆ. ಹಾಗೆಯೇ ಒಂದೇ ಬೆಂಕಿ ಕಡ್ಡಿಯಲ್ಲಿ ಮೂವರು ಬೀಡಿ ಹಚ್ಚಬಾರದು ಎಂಬ ನಂಬಿಕೆ. ಬೇರೆ ಬೇರೆ ಸಂಸ್ಕೃತಿಯ ಚೌಕಟ್ಟಿಗೆ ಸೇರಿದ ಪ್ರದೇಶಗಳಲ್ಲಿನ ನಂಬಿಕೆಗಳು ಇನ್ನೂ ಹೆಚ್ಚು ವಿರುದ್ಧಭಾವದಿಂದ ಕೂಡಿರಲೂಬಹುದು. ಉದಾಹರಣೆಗೆ:- ಗೂಬೆ ನಮಗೆ ಯಾವ ರೀತಿಯಲ್ಲಿಯೂ ಶುಭದ ಸೂಚಕವಲ್ಲವಾದರೂ, ಪಾಶ್ಚಾತ್ಯರಿಗೆ ಅದು ಶುಭದ ಸಂಕೇತ. ಹಾಗೆಯೇ ಕೋಗಿಲೆ ನಮ್ಮ ಪಾಲಿಗೆ ಮೃದು ಮಧುರವಾಗಿ ಹಾಡುವ ಮೋಹಕ ಹಕ್ಕಿಯಾದರೆ ಪಾಶ್ಚಾತ್ಯರಿಗೆ ಅದು ಮೋಸಕ್ಕೆ ಸಂಕೇತ. ಸಂಸ್ಕೃತಿಯಲ್ಲಿನ ಅಂತರದಿಂದಾಗಿ ಈ ರೀತಿಯ ಅರ್ಥಭಿನ್ನತೆ ಉಂಟಾಗಲು ಸಾಧ್ಯ. ಇದು ಒಂದೇ ನಂಬಿಕೆ ಪ್ರಾದೇಶಿಕ ಭಿನ್ನತೆಗೆ ಅನುಸಾರವಾಗಿ ಪಡೆಯುವ ಅರ್ಥಕ್ಕೆ ಸ್ಪಷ್ಟ ಉದಾಹರಣೆ. ಹಾಗೆಯೇ ಕೆಲವು ನಂಬಿಕೆಗಳಲ್ಲಿ ನಿರ್ದಿಷ್ಟ ಪ್ರಾದೇಶಿಕತೆಯನ್ನು ಗುರುತಿಸಬಹುದು. ಅವು ಅಲ್ಲಿನ ಪ್ರಾದೇಶಿಕ ಪ್ರಭಾವದಿಂದಾಗಿ ಅಥವಾ ಪರಿಸರದ ಪರಿಸ್ಥಿತಿಯ ಒತ್ತಡದಿಂದಾಗಿ ಭಿನ್ನತೆಯನ್ನು ಪಡೆದುಕೊಂಡಿರುತ್ತವೆ. ಇದಕ್ಕೆಲ್ಲಾ ಆಯಾ ಪ್ರದೇಶದ ಸಂಸ್ಕೃತಿಯ ಚೌಕಟ್ಟು ಸಾಕಷ್ಟು ನೀರೆರೆದಿರಬಹುದು. ಉದಾಹರಣೆಗೆ ಅಮವಾಸ್ಯೆ, ತೆಲುಗರಿಗೆ ಮತ್ತು ಕನ್ನಡಿಗರಿಗೆ ಕೆಟ್ಟದಿನವಾದರೆ, ತಮಿಳರಿಗೆ ಒಳ್ಳೆಯ ದಿನ. ಆದರೆ ಈ ನಂಬಿಕೆಗಳ ಮೂಲೋದ್ದೇಶ ಮಾತ್ರ ಸರ್ವ ಮಾನವರಿಗೂ ಸಮಾನವಾದುದು.

### ೧. ೨. ೫ : ಪ್ರಾಚೀನತೆಯ ಕಲ್ಪನೆ

ಮಾನವನ ಭಾವನೆಗಳ ಅಭಿವ್ಯಕ್ತಿಯ ಮಾಧ್ಯಮವಾದ ಭಾಷೆ ಹುಟ್ಟಿದಾಗ ನಂಬಿಕೆಗಳು ಅಭಿವ್ಯಕ್ತಿ ಪಡೆದು ಜನಜೀವನದಲ್ಲಿ ಚಲಾವಣೆ ಹೊಂದಿದವು. ಬದುಕಿನ ಆರಂಭದ ದಿನಗಳು ಸಂಪೂರ್ಣವಾಗಿ ಅಸ್ಥಿರತೆಯಿಂದ ಕೂಡಿದ್ದು ಒಂದು ರೀತಿಯಲ್ಲಿ ಪ್ರಕೃತಿಯ ಕೈಗೊಂಬೆಯಂತಾಗಿತ್ತು. ಅದರಿಂದ ಬೇರೆಯಾಗಿ, ಭಿನ್ನವಾಗಿ ಮಾನವ ಪ್ರಾಣಿಯಾಗಿ ಬದುಕಲಿಚ್ಛಿಸಿದಾಗ ಅನಿವಾರ್ಯವಾಗಿ ಅವನು ಹಲವು ಶಕ್ತಿಗಳ ಮೊರೆ ಹೋಗಬೇಕಾಯಿತು. ಅಂತಹ ಸಂದರ್ಭಗಳಲ್ಲಿ ದುರ್ಬಲವಾಗಿದ್ದ ಅವನ ಮಾನಸಿಕ ಸ್ಥಿತಿ ಏನನ್ನಾದರೂ ಒಪ್ಪಿಕೊಳ್ಳಲು ಸಿದ್ಧವಾಗಿತ್ತು. ಅಂತಹ ಸನ್ನಿವೇಶಗಳಲ್ಲಿ ತಾತ್ಕಾಲಿಕವಾಗಿ ದೊರೆತ ಸಮಾಧಾನವೆ ಮನಸ್ಥೈರ್ಯವನ್ನು ಹೆಚ್ಚಿಸಿ, ಅವನಲ್ಲಿ

ನಂಬಿಕೆಯನ್ನುಂಟು ಮಾಡಿರಬೇಕು. ಹಾಗಾಗಿ ನಂಬಿಕೆಗಳು ಪ್ರಾಚೀನ ಮಾನವನ ಬದುಕಿನೊಂದಿಗೆ ಜನ್ಮ ತಾಳಿರುವುದರಲ್ಲಿ ಆಶ್ಚರ್ಯವಿಲ್ಲ.

### ೧. ೨. ೬: ಅನುಭವ ಹಾಗೂ ಮಾನಸಿಕ ಅನುಭವಗಳ ಮಿಳಿತ

ನಂಬಿಕೆಗಳು ಜನತೆಯ ಜೀವನಾನುಭವ ಮೂಸೆಯಿಂದ ಮೂಡಿಬಂದು, ಬದುಕಿನಲ್ಲಿ ಬೆರೆತು ಪರಿಣಾಮಕಾರಿಯಾಗಿ ತಮ್ಮ ಪ್ರಭಾವ ಬೀರಿ ಜೀವಂತವಾಗಿವೆ. ಪುರಾತನ ಕಾಲದಿಂದ ಮಾನವ ನಾಗರಿಕತೆ ಪ್ರೌಢಸಂಸ್ಕೃತಿಯ ಹಂತವನ್ನು ಮುಟ್ಟುವವರೆಗೆ ಅವಿರತ ಅನುಭವಗಳನ್ನು ಪಡೆಯುತ್ತಾ ಬಂದಿದ್ದಾನೆ. ಆತನ ಈ ಅನುಭವಗಳು ಜೀವನದಲ್ಲಿ ಕೆಲವು ನಂಬಿಕೆಗಳಿಗೆ ಕಾರಣವಾಗಲೂ ಬಹುದು. ಅಲ್ಲದೆ ಮಾನಸಿಕವಾಗಿಯೂ ಕೆಲವು ನಂಬಿಕೆಗಳು ಉಂಟಾಗುತ್ತವೆ. ಅವುಗಳು ಘಟನೆಗಳ ಪುನರಾವೃತ್ತಿಯಾಗಿರಬಹುದು ಅಥವಾ ಎಂದೋ ನಡೆದ ಘಟನೆಗಳು ಮತ್ತೆ ನಡೆದಾಗ ಆ ಘರ್ಷಣೆಗಳ ಸಮರ್ಥನೆಗೆ ಅದು ಒಪ್ಪಿಗೆ ಎಂಬ ನಂಬಿಕೆಗಳು ಹುಟ್ಟಿಕೊಂಡಿರಬಹುದು.

### ೧. ೨. ೭: ಅಭಯ ಅಥವಾ ನೆಚ್ಚಿಕೆಯ ಒಂದು ಮಾನಸಿಕ ಸ್ಥಿತಿ

ನಂಬಿಕೆಗಳ ನೆಲೆಗಟ್ಟೆಲ್ಲವೂ ನಂಬುವವರ ಮನೋ ವೈಖರಿಯನ್ನು ಪ್ರತಿಬಿಂಬಿಸುತ್ತದೆ. ಒಮ್ಮೊಮ್ಮೆ ಒಂದು ನಂಬಿಕೆಯ ಆಧಾರವೇನೆಂದು ನಿರ್ದಿಷ್ಟವಾಗಿ ಮನಸ್ಸಿನಲ್ಲಿಲ್ಲದಿದ್ದರೂ ಆ ನಂಬಿಕೆಯನ್ನು ಒಪ್ಪಿ ಸ್ವೀಕರಿಸುವ ಸಾಧ್ಯತೆಯಿದೆ. ಪರಿಣಿತರ ತೀರ್ಪು ಎಷ್ಟೋ ವೇಳೆ ಪೂರ್ಣ ಪ್ರಜ್ಞೆ ಇಲ್ಲದ ಜೀವನಾನುಭವಗಳ ಮೇಲೆಯೇ ನಿಂತಿರುತ್ತದೆ. ಉದಾಹರಣೆಗೆ ಕೋಟೆ ಮುಗಿಲೆದ್ದರೆ ಮಳೆ ಬರುತ್ತದೆ. ವಿರಾಟಪರ್ವ ಓದಿದರೆ ಮಳೆ ಬರುತ್ತದೆ ಎಂದು ಹೇಳುವ ನಂಬಿಕೆಗೆ ಅಷ್ಟಾಗಿ ಆಧಾರವಿರುವುದಿಲ್ಲ. ಆದರೆ ಜೀವನಾನುಭವ ಆ ಮಾತನ್ನಾಡಿಸುತ್ತದೆ. ಆ ಮಾತು ಬಹುಪಾಲು ಸತ್ಯವಾಗಿರುತ್ತದೆ.

### ೧. ೨. ೮: ಧಾರ್ಮಿಕ ಮನೋಧರ್ಮವಾಗಿ

ಧರ್ಮದ ಮೂಲ ಅಂಶವೇ ನಂಬಿಕೆ ಮತ್ತು ಆಚರಣೆ. ಪ್ರಪಂಚದಲ್ಲಿರುವ ಯಾವುದೇ ಧರ್ಮಗಳು ಈ ನಿಯಮದ ಆಧಾರದ ಮೇಲೆ ನಿಂತುಕೊಂಡಿವೆ. ಯಾವುದೇ ಧರ್ಮವಾದರೂ ತನ್ನದೇ ಆದ ನಂಬಿಕೆಗಳನ್ನು ರೂಢಿಸಿಕೊಂಡು ಅದಕ್ಕೆ ತಕ್ಕ ಆಚರಣೆಗಳನ್ನು ನೆರವೇರಿಸುತ್ತಾ ಬಂದಿದೆ. ಧರ್ಮವನ್ನು ಒಂದು ರೀತಿಯಲ್ಲಿ ನಂಬಿಕೆಗಳ ಸಮೂಹ ಎಂತಲೂ ಕರೆಯಬಹುದು. ಅತಿಮಾನುಷ ಭಯವೇ ಈ

ನರ್ಗದ ನಂಬಿಕೆಗಳ ಉಗಮಕ್ಕೆ ಬುಂಡವಾಳ. ಪ್ರಕೃತಿಯ ಮಧ್ಯೆ ಬಾಳುವ ಮಾನವ ಹಲವು ಶಕ್ತಿಗಳನ್ನು ದೇವರು ಎಂದು ನಂಬಿ ಪೂಜಿಸಲು ಪ್ರಾರಂಭಿಸಿ, ಒಲಿಸಿಕೊಳ್ಳಲು ಪ್ರಯತ್ನಿಸಿದುವರ ಜೊತೆಗೆ ಅವುಗಳ ವಿರುದ್ಧವಾಗಿ 'ದೆವ್ವ'ಗಳ ಭಯವೂ ಅಧಿಕವಾಯಿತು. ಇವುಗಳಿಂದ ರಕ್ಷಣೆ ಪಡೆಯಲು ಬಾಳಿನಲ್ಲಿ ನೆಮ್ಮದಿಯನ್ನು ಕಂಡುಕೊಳ್ಳಲು ಮತ್ತೆ ಕೆಲವು ನಂಬಿಕೆಗಳು ರೂಪಗೊಂಡವು.

### ೧. ೨. ೯: ಜೀವನ ನಿಯಂತ್ರಕವಾಗಿ

ಜೀವನ ನಿಯಂತ್ರಣ ನಂಬಿಕೆಯ ಒಂದು ಗುಣ. ಇದು ವ್ಯಕ್ತಿ ಅಥವಾ ಬಾಹ್ಯ ಸಂಸ್ಕೃತಿಯ ಮಟ್ಟದಲ್ಲಿ ನಡೆಯಬಹುದು. ಕೆಲವು ನಂಬಿಕೆಗಳು ಸಮಾಜದಲ್ಲಿ ನೈತಿಕ ಸಂವರ್ಧನೆಗೂ, ಪರಿಶುದ್ಧತೆ, ಭಕ್ತಿ, ಪಾವಿತ್ರ್ಯ ದೃಷ್ಟಿ ಮೊದಲಾದವುಗಳ ಸಂರಕ್ಷಣೆಗೂ ಸಹಾಯಕವಾಗುತ್ತವೆ. ಉದಾಹರಣೆಗೆ ಮೆಟ್ಟಿನ ಕಾಲಿನಲ್ಲಿ ಗಂಗೆಯೊಳಗೆ ಇಳಿಯಬಾರದು. ಹೊರಗಡೆಯಾದ ಹೆಂಗಸರು ಹೂ,ಬಳ್ಳಿಗಳನ್ನು,ಫಲಬಿಡುವ ಮರಗಿಡಗಳನ್ನು ಮುಟ್ಟಬಾರದು.

ಹೀಗೆಯೇ ಕೆಲವು ನಂಬಿಕೆಗಳಿಂದ ನಾನಾಬಗೆಯ ಆಪತ್ತುಗಳು ಆಗುವವು. ಗ್ರಾಮೀಣ ಜನ ಭಾವುಕತೆಯಿಂದ ಕೆಲವು ಕೆಲಸ ಕಾರ್ಯಗಳಲ್ಲಿ ಪೂರ್ವಾಪರ ಯೋಚಿಸದೆ ದುಡುಕಿನಿಂದ ಕಾರ್ಯಮಾಡಿ, ಆದ ತಪ್ಪಿಗೆ ಪರಿತಪಿಸುವುದು ಅವರ ಜಾಯಮಾನ. ಇಂತಹ ಎಷ್ಟೋ ನಿದರ್ಶನಗಳಿಗೆ ನಂಬಿಕೆಗಳೇ ಕಾರಣ. ಉದಾಹರಣೆಗೆ, ದೆವ್ವ ಹಿಡಿದವರಿಗೆ, ದೆವ್ವ ಬಿಡಿಸಲು ಕಬ್ಬಿಣವನ್ನು ಚೆನ್ನಾಗಿ ಕಾಯಿಸಿ ಕೈ, ಕಾಲು, ಮುಖ, ಮೂಗು, ಸೊಂಟ, ಬಾಯಿ ಹೀಗೆ ಅಂಗಾಂಗಗಳ ಭೇದವಿಲ್ಲದೆ ಬರೆ ಹಾಕುವುದು ಮುಂತಾದವು. ಒಂದು ನಂಬಿಕೆಯಿಂದ ಒಳ್ಳೆಯದಾಗುತ್ತದೆ ಎಂಬ 'ನಂಬಿಕೆ' ಮಾತ್ರ ಅವರಲ್ಲಿ ಬೇರೂರಿರುತ್ತದೆ. ಅವುಗಳಲ್ಲಿ ಕೆಲವು ನಂಬಿಕೆಗಳ ಬಗ್ಗೆಯಾದರೂ ಅವರು ಯೋಚಿಸುವ ಗೋಜಿಗೆ ಹೋಗುವುದಿಲ್ಲ. ಅವುಗಳನ್ನು ಪ್ರಶ್ನಿಸುವ ಹಕ್ಕು ನಮಗಿಲ್ಲವೆಂದು ಹಾಗೆಯೇ ನಡೆದುಕೊಳ್ಳುತ್ತಾರೆ. ಎಲ್ಲಿಯೋ ಹೂತಿಟ್ಟ ನಿಧಿಯನ್ನು ತೆಗೆಯಬೇಕಾದರೆ ನರಬಲಿ ಅಗತ್ಯ ಎಂಬ ನಂಬಿಕೆಯಿಂದ ಅದರಂತೆ ನಡೆದುಕೊಳ್ಳುವವರನ್ನು ಕಂಡಾಗ ನಂಬಿಕೆಗಳು ಮಾನವನ ಜೀವನದಲ್ಲಿ ವಹಿಸುವ ಪಾತ್ರವೇನೆಂಬುದು ಗೊತ್ತಾಗುತ್ತದೆ.

### ೧. ೩: ಮೂಢನಂಬಿಕೆ

ಪ್ರತಿ ಸಮಾಜವು ಅನಾದಿಕಾಲದಿಂದ ತನ್ನದೇ ಆದ ನಂಬಿಕೆಗಳನ್ನು

ಆಚರಣೆಯಲ್ಲಿಟ್ಟುಕೊಂಡು ಬಂದಿದೆ. ಕಾಲ ದೇಶಗಳಿಗೆ ಅನುಗುಣವಾಗಿ ಇವು ಬದಲಾಗುತ್ತಲೂ ಇರುತ್ತವೆ. ಈ ರೀತಿಯ ನಂಬಿಕೆಗಳಲ್ಲಿ ಎಷ್ಟೊ ಆ ಸಮಾಜದ ಸಂಸ್ಕೃತಿ ಮತ್ತು ನಾಗರೀಕತೆಗಳ ಬೆಳವಣಿಗೆಗೆ ರೂಪುಕೊಡುತ್ತವೆ. ಹಾಗೆಯೇ ಇನ್ನೆಷ್ಟೋ ನಂಬಿಕೆಗಳು ಅವೈಚಾರಿಕ ಹಾಗೂ ಅವೈಜ್ಞಾನಿಕವಾಗಿರುತ್ತವೆ. ಇವುಗಳನ್ನೇ ಮೂಢನಂಬಿಕೆಗಳೆಂದು ಕರೆಯುವರು. ಸಾಮಾನ್ಯವಾಗಿ ಮೂಢನಂಬಿಕೆಗಳು ವೈಚಾರಿಕತೆಗೆ ಹಾಗೂ ಅನುಭವಗಳಿಗೆ ವಿರುದ್ಧವಾದವು. ಈ ನಂಬಿಕೆಗಳಿಗೆ ಯಾವುದೇ ಸಾಕ್ಷ್ಯಾಧಾರಗಳಿಲ್ಲದೆ, ದೊರಕಬಹುದಾದ ಆಧಾರಗಳಿಗೆ ವಿರುದ್ಧವಾಗಿರುತ್ತವೆ. ಯಾವುದು ಮೂಢನಂಬಿಕೆ, ಯಾವುದು ಅಲ್ಲ ಹಾಗೂ ಮೂಢನಂಬಿಕೆಗಳಲ್ಲೂ ಯಾವುದು ವಿನಾಶಕಾರಿ ಎಂಬುದರ ಬಗ್ಗೆ ಅಭಿಪ್ರಾಯಭೇದಗಳಿರಬಹುದು. ಇದು ವ್ಯಕ್ತಿಯೊಬ್ಬನ ಬೌದ್ಧಿಕ ಮಟ್ಟ, ಸಂಸ್ಕಾರ ಹಾಗೂ ಪರಿಸರಗಳನ್ನು ಅವಲಂಬಿಸಿರುತ್ತದೆ. ಯಾವುದೇ ಸಮಾಜವು ನಾಗರಿಕತೆಯ ಪಥದಲ್ಲಿ ಮುಂದುವರಿದಂತೆ, ವೈಜ್ಞಾನಿಕ ಪ್ರಗತಿಯನ್ನು ಸಾಧಿಸಿದಂತೆಲ್ಲಾ ಬಹಳಷ್ಟು ಮೂಢನಂಬಿಕೆಗಳು ಹಾಗೂ ಅವುಗಳನ್ನು ಆಧರಿಸಿದ ದುಷ್ಟ ಮತ್ತು ಅರ್ಥಹೀನ ಪದ್ಧತಿಗಳು ಮರೆಯಾಗುವುದು ಸಹಜ. ಮೂಢನಂಬಿಕೆಗಳು ಎನ್ನುವ ಕಲ್ಪನೆಯು ಅಸಹಜವಾದದ್ದು. ಹಿಂದಿನ ಸಮಾಜವು ತನ್ನ ರಕ್ಷಣೆಗಾಗಿ ಹಲವಾರು ಪ್ರಯತ್ನಗಳನ್ನು ಮಾಡಿರುವುದು, ಆ ಪ್ರಯತ್ನಗಳು ಆಯಾ ಕಾಲದ ಅವರ ತಿಳುವಳಿಕೆಯ ಆಧಾರದ ಮೇಲೆ ನಿಂತಿರುತ್ತವೆ. ಪ್ರಥಮದಲ್ಲಿ ಆಚರಣೆಗೆ ಬಂದಾಗ ಅವನ್ನು ಅಂದಿನ ಜನಪದರ ತಿಳುವಳಿಕೆಯು ಉತ್ತಮ ಸೂಚನೆಗಳೆಂದೇ ಅಂಗೀಕರಿಸಿರಬೇಕು. ಅಂದಿನ ಜ್ಞಾನವಂತರು, ವಿಜ್ಞಾನಿಗಳು ಈ ತಿಳುವಳಿಕೆಯನ್ನು ಆಚರಣೆಯಲ್ಲಿ ತರಲು ಜನರನ್ನು ಪ್ರೋತ್ಸಾಹಿಸಿರಲೂ ಸಾಕು. ಆದ್ದರಿಂದ ಈ ನಡವಳಿಕೆಗಳು, ನಂಬಿಕೆಗಳು ತಲೆತಲಾಂತರದಿಂದ ಜನರಲ್ಲಿ ಬಂದಿವೆ. ಬರುಬರುತ್ತಾ ವಿಜ್ಞಾನವು ಮುಂದುವರೆದಂತೆ ಜನತೆಯ ತಿಳುವಳಿಕೆ ಹೆಚ್ಚಿದಂತೆ ಈ ನಂಬಿಕೆಗಳು ಅವೈಜ್ಞಾನಿಕವೆಂದೂ ಅಜ್ಞಾನದ ವಿಷಯವೆಂದೂ ಪರಿಗಣಿಸಲ್ಪಡಹತ್ತಿದವು. ಇಂತಹ ನಂಬಿಕೆಗಳನ್ನೇ ನಾವು ಮೂಢನಂಬಿಕೆಗಳೆಂದು ಕರೆಯುತ್ತಿರುವುದು. ಕಾರಣ ಇಂದು ನಾವು ಮೂಢನಂಬಿಕೆಗಳೆಂದು ಕರೆಯುತ್ತಿರುವ ಸಂಗತಿಗಳು ಒಂದು ಕಾಲದಲ್ಲಿ ವಿಶಿಷ್ಟ ಹಾಗೂ ವಿಶೇಷ ಜ್ಞಾನದ ಕುರುಹುಗಳಾಗಿರಲು ಸಾಕು.

ಪ್ರತಿಯೊಂದು ಕಾಲದಲ್ಲಿಯೂ ವೈಜ್ಞಾನಿಕ ತಿಳುವಳಿಕೆಗೊಂದು ಪರಿಮಿತಿ ಇದ್ದೇ ಇರುತ್ತದೆ. ಮಾನವನ ವಿಚಾರ ಮತ್ತು ಅನುಭವ ಅನೇಕ ಅಂಶಗಳನ್ನು ವೈಜ್ಞಾನಿಕವಾಗಿ ವಿವರಿಸಲು ಸಾಧ್ಯವಾಗಲಿಲ್ಲ. ಅಂತಹ ಅಂಶಗಳನ್ನು ಅಂತರ್ಭೋದೆ ಮತ್ತು ತತ್ವಜ್ಞಾನದ ದೃಷ್ಟಿಕೋನಗಳಿಂದ ವೀಕ್ಷಿಸಿದರು. ವೈಜ್ಞಾನಿಕವಾಗಿ ವಿವರಿಸಲು

ಸಾಧ್ಯವಿಲ್ಲದ ಘಟನೆಗಳನ್ನು ಪುರಾಣಕಥೆ, ಮೂಢನಂಬಿಕೆ,ಪವಾಡ ಹಾಗೂ ಅಂಧ ಶ್ರದ್ಧೆಗಳಿಗೆ ಹೋಲಿಸುವ ಜನ ಆಗಲೂ ಕೂಡಾ ಸಮಾಜದಲ್ಲಿದ್ದರು.

ವರ್ಜಿಲ್ ಮಹಾಕವಿಯು ಮೂಢನಂಬಿಕೆಗಳು ನಂಬಿಕೆಗಳಾಗಿ, ನಂಬಿಕೆಗಳು ಮೂಢನಂಬಿಕೆಗಳಾಗಿ ಚಲಾವಣೆಯಲ್ಲಿದ್ದು, ಅವುಗಳನ್ನು ಬೇರೆ ಬೇರೆಯಾಗಿ ವಿಭಾಗಿಸಲು ಸಾಧ್ಯವಿಲ್ಲ ಎಂದು ಹೇಳುತ್ತಾ, ಮೂಢನಂಬಿಕೆಗಳನ್ನು ಸ್ಥೂಲವಾಗಿ 'ಒಬ್ಬ ವ್ಯಕ್ತಿ ತನ್ನ ಜೀವಿತದಲ್ಲಿನ ಸಮಾಜದಲ್ಲಿನ ನಿರಾಧಾರ ನಂಬಿಕೆಗಳನ್ನು ಒಪ್ಪಿ, ಹಾಗೆಯೇ ಆ ಸಮಾಜದ ಜನರೂ ಸಾಮೂಹಿಕವಾಗಿ ಒಪ್ಪಿದ್ದು, ಸಾಮೂಹಿಕ ಅಭ್ಯಾಸದಲ್ಲಿದ್ದು, ಕಾಲದಿಂದ ಕಾಲಕ್ಕೆ ಶಾಸ್ತ್ರೀಯವಾಗಿ ಭದ್ರವಾಗಿಟ್ಟುಕೊಂಡು ಬಂದ ವಿಶ್ವಾಸವಿಲ್ಲದ ವಿಶ್ವಾಸಗಳೇ ಮೂಢನಂಬಿಕೆಗಳು' ಎನ್ನುತ್ತಾರೆ.

ನಂಬಿಕೆಗಳಲ್ಲಿ ಕುರುಡು ವಿಶ್ವಾಸವನ್ನಿಟ್ಟುಕೊಂಡು, ಅವುಗಳನ್ನು ಚಲಾವಣೆಯಲ್ಲಿ ತಂದಾಗ ಮೂಢನಂಬಿಕೆಗಳೆನ್ನುವರು. ಸಾಮಾನ್ಯವಾಗಿ ಅತಿಮಾನುಷ ಶಕ್ತಿ ಮತ್ತು ಶಕುನಗಳ ವಿಷಯದಲ್ಲಿ ಮೂಢನಂಬಿಕೆಗಳು ಹೆಚ್ಚಾಗಿರುತ್ತವೆ. ಉದಾಹರಣೆಗೆ, ದೇವರ ಮೇಲಿನ ಹೂ ಬಲಕ್ಕೆ ಬಿದ್ದರೆ ಒಳ್ಳೆಯದು; ಎಡಕ್ಕೆ ಬಿದ್ದರೆ ಕೆಟ್ಟದ್ದು. ಹಲವಾರು ನಂಬಿಕೆಗಳು, ಪದ್ಧತಿಗಳು, ಆಚರಣೆಗಳು, ಪ್ರಪಂಚದ ಬಗ್ಗೆ ಮತ್ತು ಮನುಷ್ಯನ ಜೀವನದ ಬಗ್ಗೆ ಹೊಂದಿರುವ ವೈಜ್ಞಾನಿಕವಲ್ಲದ ಕಲ್ಪನೆಗಳಾಗಿರುತ್ತವೆ. ಹಾಗೆಯೇ ಕೆಲವು ದೈವಿಕಶಕ್ತಿ ಮತ್ತು ಮಾಂತ್ರಿಕ ಶಕ್ತಿಯ ಬಗ್ಗೆ ವಿಶ್ಲೇಷಣೆಗೊಳಪಡಿಸದೆ ಭೌತಿಕ ಜಗತ್ತು ಹೊಂದಿರುವ ಅಭಿಪ್ರಾಯಗಳಾಗಿರುತ್ತವೆ. ಕೆಲವು ವಸ್ತು ಮತ್ತು ವ್ಯಕ್ತಿಗಳ ಬಗ್ಗೆ ಹೊಂದಿರುವ ಕಾಲ್ಪನಿಕವಾದ ನಂಬಿಕೆಗಳನ್ನು ಮೂಢನಂಬಿಕೆಗಳೆಂದು ಕರೆಯುವರು. ಮೂಢನಂಬಿಕೆಗಳು ಯಾರ ಅನುಭವಕ್ಕೂ ಬಾರದವಾಗಿರುತ್ತವೆ. ಇಲ್ಲಿ ವಿಚಾರಕ್ಕೆ ಎಳ್ಳಷ್ಟೂ ಆಸ್ಪದವಿರುವುದಿಲ್ಲ. ಯುಕ್ತ ತಿಳುವಳಿಕೆ, ಯುಕ್ತ ಆಚರಣೆ ಇಲ್ಲದೆ ಜನರನ್ನು ಸಾಮಾಜಿಕ ಚಿಂತನೆ ಮತ್ತು ಬೆಳವಣಿಗೆಯಿಂದ ಹಿಂದೆ ಸರಿಸುವ ನಂಬಿಕೆಗಳನ್ನು ಸಮಕಾಲೀನವಾಗಿ ಮೂಢನಂಬಿಕೆ ಎಂದು ಕರೆಯುತ್ತೇವೆ.

ಮೂಢನಂಬಿಕೆ ಎಂಬ ಕಲ್ಪನೆಯು ಆ ಪದವನ್ನು ಬಳಸುವ ತೀಕ್ಷ್ಣತೆಯನ್ನೊಳಗೊಂಡಿರುತ್ತದೆ. ಅಂದರೆ ಜನರಿಗೆ ಮೂಢನಂಬಿಕೆ ಎಂದು ಗೊತ್ತಿದ್ದರೂ ಸಹ ಅವುಗಳನ್ನು ಆಚರಣೆಯಲ್ಲಿಟ್ಟುಕೊಂಡಿರುತ್ತಾರೆ ಮತ್ತು ಅವುಗಳನ್ನು ನಂಬುತ್ತಾರೆ. ಯಾವುದೇ ವಸ್ತು, ವಿಷಯ, ಹೇಳಿಕೆಯನ್ನು ನಂಬುವವರ ಮಾನಸಿಕ ಸ್ಥಿತಿಯನ್ನು ಗಣನೆಯಲ್ಲಿಟ್ಟುಕೊಂಡು ನಾವು ಮೂಢನಂಬಿಕೆಯನ್ನು ನಿರ್ಧರಿಸಬಹುದು. ಅಂದರೆ ಯಾವುದಾದರು ಸ್ಪಷ್ಟ ಕಾರಣವಿದ್ದರೆ ನಂಬಿಕೆಯಾಗುತ್ತದೆ.

ಉದಾಹರಣೆಗೆ. 'ಅಡಿಕೆ ತಿಂದರೆ ಕಾಮಾಲೆ ರೋಗ ಬರುತ್ತದೆ'. ಯಾವುದೇ ಕಾರಣವಿಲ್ಲದಿದ್ದರೆ ಆ ಹೇಳಿಕೆಯು ಮೂಢನಂಬಿಕೆಯಾಗುತ್ತದೆ. ಉದಾಹರಣೆಗೆ. 'ಹಜಾಮ ಎದುರಾಗಬಾರದು'. ಅಂದರೆ ಕಾರ್ಯಕಾರಣ ಸಂಬಂಧದ ಆಧಾರದ ಮೇಲೆ ನಾವು ನಂಬಿಕೆ ಮತ್ತು ಮೂಢನಂಬಿಕೆಯನ್ನು ಗುರುತಿಸಬಹುದು. ಮೂಢನಂಬಿಕೆಯನ್ನಾವರಿಸಿದ ಮನಸ್ಸು ಯಾವಾಗಲೂ ಯಾವುದರ ಬಗ್ಗೆಯೂ ತೀರ್ಮಾನ ಕೈಗೊಳ್ಳುವಾಗ ಸಾಕ್ಷ್ಯಾಧಾರಗಳ ಕಡೆಗೆ ಗಮನ ಹರಿಸುವುದಿಲ್ಲ. ಬೌದ್ಧಿಕವಾಗಿ ಶಿಕ್ಷಣ ಪಡೆದವರಲ್ಲಿ ಮಾತ್ರ ಮೂಢನಂಬಿಕೆಗಳು ಗಾಢವಾದ ಪ್ರಭಾವವನ್ನು ಬೀರುವುದಿಲ್ಲ. ಮೂಢನಂಬಿಕೆ ಕೂಡಾ ಮನಸ್ಸಿನ ಒಂದು ವಿಚಾರಧಾರೆಯೇ ಆಗಿದ್ದು, ಅದು ಮನಸ್ಸನ್ನು ನಿಯಂತ್ರಿಸುತ್ತದೆ. ಮೂಢನಂಬಿಕೆಯುಳ್ಳ ಮನುಷ್ಯ ತಾನು ಏನನ್ನು ನಂಬಬೇಕೆಂದಿರುವನೋ ಅದನ್ನು ನಂಬುತ್ತಾನೆ ಅಥವಾ ತನಗೆ ಅಗತ್ಯವಿದ್ದುದನ್ನು ನಂಬುತ್ತಾನೆ. ನಿಸರ್ಗವು ವಿರೋಧಿಯಾದಾಗ ಭಯ ಮತ್ತು ಉದ್ರೇಕಗಳು ಮನಸ್ಸನ್ನು ಆಕ್ರಮಿಸುತ್ತವೆ. ಆಗ ತರ್ಕಶಕ್ತಿ ಮತ್ತು ಆತ್ಮವಿಶ್ವಾಸ ಹೊರಟುಹೋಗಿ ಮನುಷ್ಯ ಮೂಢನಂಬಿಕೆಗೆ ಶರಣಾಗುತ್ತಾನೆ. ತಾನೇ ಕಲ್ಪಿಸಿಕೊಂಡ ನರಕದಲ್ಲಿ ಒದಗುವ ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಮೂಢನಂಬಿಕೆ ಒಂದು ತೆರನಾದ ವಿಮೆ ಎಂದು ಮನುಷ್ಯ ಭಾವಿಸುತ್ತಾನೆ.

ಹೀಗೆಯೇ ಪಾಶ್ಚಾತ್ಯ ದೇಶಗಳಲ್ಲೂ ಸಹ ಇಂತಹ ನಂಬಿಕೆಗಳಿವೆ. 'ಹದಿಮೂರು ಎಂಬುದು ಒಂದು ಅಶುಭ ಸಂಖ್ಯೆ'. 'ಪಾತ್ರೆ ಒರೆಸುವ ಮಹಿಳೆಯ ಕೈಯಿಂದ ಬಟ್ಟೆಜಾರಿ ಬಿದ್ದರೆ, ಮನೆಗೆ ಅತಿಥಿಗಳು ಆಗಮಿಸುತ್ತಾರೆ'. 'ಪೆಟ್ಟಿಗೆಯೊಂದರಲ್ಲಿ ಪ್ರವಾದಿಯೊಬ್ಬನ ಕೂದಲೆಳೆಯೋ, ಮೊಳೆಯ ತುಂಡೋ ಅಥವಾ ಒಂದು ಕೊಳಕು ಬಟ್ಟೆಯ ಚೂರೋ ಇದ್ದಲ್ಲಿ, ಆ ಪೆಟ್ಟಿಗೆಯನ್ನು ಚುಂಬಿಸಿದಾಗ ಕಾಯಿಲೆಗಳು ವಾಸಿಯಾಗುತ್ತವೆ' ಹೀಗೆ ಪ್ರತಿ ಸಮಾಜದಲ್ಲೂ ಹಾಸು ಹೊಕ್ಕಾಗಿರುವ ಈ ಮೂಢ ನಂಬಿಕೆಗಳು ಮನುಷ್ಯನ ಆಲೋಚನಾ ಶಕ್ತಿಗೆ ಧಕ್ಕೆಯುಂಟು ಮಾಡುವುದಲ್ಲದೆ. ಸಾರ್ವತ್ರಿಕ ಪ್ರಗತಿಯನ್ನು ಕುಂಠಿತಗೊಳಿಸುತ್ತವೆ.

ಕೆಲವು ಮೂಢನಂಬಿಕೆಗಳು ನೋಡಲು ಕ್ಷುಲ್ಲಕ. ಅವುಗಳ ಆಳ ಹಾಗೂ ಪರಿಣಾಮ ಭಯಂಕರ. ಅವು ವ್ಯಕ್ತಿಯಲ್ಲಿ, ಸಮಾಜದಲ್ಲಿ ಬೇರೂರಿವೆ. ಸಾಮಾಜಿಕ ಜೀವನವನ್ನೇ ಅಲ್ಲೋಲ ಕಲ್ಲೋಲ ಮಾಡುತ್ತಿವೆ. ವ್ಯಕ್ತಿಯ ಜನನ ಕಾಲದಲ್ಲಿರುವ ಮೂಢ ನಂಬಿಕೆಗಳು ತುಂಬಾ ವಿಚಿತ್ರವಾಗಿವೆ. ವ್ಯಕ್ತಿಯ ಜನನ ಕಾಲದಲ್ಲಿರುವ ಗ್ರಹಗಳ ಸ್ಥಿತಿಯು ಆತನ ಬೆಳವಣಿಗೆ. ವಿದ್ಯೆ, ಹುದ್ದೆ, ಮದುವೆ, ಮಕ್ಕಳು

ಇತ್ಯಾದಿಗಳನ್ನು ನಿಯಂತ್ರಿಸಲ್ಪಡುತ್ತವೆ ಎಂಬ ಮೂಢನಂಬಿಕೆಗಳು ಸಹ ಇವೆ.

ಎರಡು ಬೇರೆ ಬೇರೆ ಸಮಾಜಗಳ ಧಾರ್ಮಿಕಮೂಢನಂಬಿಕೆಗಳ ಮಧ್ಯೆ ಘರ್ಷಣೆಯುಂಟಾದಾಗಲೇ ಅಮಾನುಷವೂ ಹೇಯವೂ ಆದ ಮತೀಯ ಗಲಭೆಗಳು ತಲೆದೋರುವವು. ಅನೇಕ ವೇಳೆ ಯಾವುದೋ ದೇಶ ಕಾಲಗಳಿಗೆ ಹಾಗೂ ಸಮಕಾಲೀನ ಸಾಮಾಜಿಕ ಪದ್ಧತಿಗಳು ಇಂದಿನ ಪರಿಸ್ಥಿತಿಗೆ ಹೊಂದಿಕೊಳ್ಳದಿದ್ದರೂ ಹಾಗೆಯೇ ಆಚರಣೆಯಲ್ಲಿ ಉಳಿದುಕೊಂಡು ಬಂದಿರುತ್ತವೆ. ಪಟ್ಟಭದ್ರ ಹಾಗೂ ಸ್ವಾರ್ಥವುಳ್ಳ ಕೆಲವೇ ವ್ಯಕ್ತಿಗಳು ಅಥವಾ ಅಧಿಕಾರ ಶಾಹೀ (ಆರ್ಥಿಕ, ಸಾಮಾಜಿಕ ಅಥವಾ ರಾಜಕೀಯವಾಗಿರಬಹುದು) ಗುಂಪುಗಳು ಸಹ ಈ ತರಹದ ನಂಬಿಕೆಗಳ ಆಚರಣೆಗೆ ಕಾರಣೀಭೂತವಾಗಬಲ್ಲವು. ನಮ್ಮ ಸಮಾಜದಲ್ಲೇ 'ದೇವದಾಸಿ' ಪದ್ಧತಿ ಹಾಗೂ ಅಮಾನುಷವಾದ 'ಸತೀ' ಪದ್ಧತಿಗಳು ಕಣ್ಣೆದುರಿಗಿವೆ.

ನಮ್ಮ ಸಂಪ್ರದಾಯವಾದಿಗಳ ಒಂದು ದೃಢವಾದ ಮೂಢನಂಬಿಕೆಯೆಂದರೆ, ಹಿಂದಿನ ಜನ್ಮಗಳಲ್ಲಿ ಸಂಪಾದಿಸಿದ ಕೆಟ್ಟ ಕರ್ಮವು ಈ ಜನ್ಮದಲ್ಲಿ ಕೆಟ್ಟ ಫಲವಾಗಿ ಪರಿಣಮಿಸುತ್ತದೆ ಎಂಬುದು. ಇದನ್ನು ಒಪ್ಪಿ ಆರ್ಥಿಕ ಹಾಗೂ ಸಾಮಾಜಿಕ ಶೋಷಣೆಗೆ ಗುರಿಯಾದ ಜನ ಬಹಳ ಕಾಲದಿಂದ ದಾರುಣವಾದ ಕಷ್ಟ ಕಾರ್ಪಣ್ಯಗಳನ್ನು ಯಾವ ತಪ್ಪನ್ನೂ ಮಾಡದೆ ಮೌನವಾಗಿ ಅನುಭವಿಸುತ್ತಲೇ ಬಂದಿದ್ದಾರೆ. ಅಂತಹ ಶೋಷಿತ ವರ್ಗದ ಜನತೆಯಲ್ಲಿ ರಕ್ತಗತವಾಗಿ ಬಂದಿರುವ ದೃಢವಾದ ನಂಬಿಕೆಯೆಂದರೆ 'ಹೀಗೆ ಕಷ್ಟಗಳನ್ನು ಅನುಭವಿಸಬೇಕಾದದ್ದು ನನ್ನ ಕರ್ಮ, ಇದೆಲ್ಲಾ ಸವೆದ ಮೇಲೆ ನನಗೂ 'ಒಳ್ಳೆಯ ಜನ್ಮವು' ಪ್ರಾಪ್ತಿಯಾಗಿ ಶುಭಫಲಗಳೂ ದೊರಕಬಹುದು' ಎಂಬ ಮೂಢನಂಬಿಕೆ. ಅಲ್ಲದೆ ಮೂಢನಂಬಿಕೆಗಳು ನಾವು ಯಾವ ದಿನ ಪ್ರಯಾಣ ಮಾಡಬೇಕು, ಯಾವಾಗ ವ್ಯಾಪಾರ ಆರಂಭಿಸಬೇಕು ಯಾವಾಗ ಮದುವೆಯಾಗಬೇಕು ಮುಂತಾದವುಗಳನ್ನೆಲ್ಲಾ ನಿಷ್ಕರ್ಷಿಸುತ್ತವೆ. ಈ ಮೂಲಕ ವ್ಯಕ್ತಿ ಮತ್ತು ಸಮಾಜದ ಚಲನೆಯನ್ನು ನಿಯಂತ್ರಿಸುತ್ತವೆ. ನಾವು ಜನಿಸುವ ದಿನ ನಮ್ಮ ಕೈಯಲ್ಲಿದ್ದರೆ ಅದನ್ನು ನಿಷ್ಕರ್ಷೆ ಮಾಡುತ್ತಿದ್ದವೇನೋ? ಆದರೆ ಸ್ವಾರ್ಥ ಮತ್ತು ಭ್ರಷ್ಟಾಚಾರಕ್ಕೆ ಮಾತ್ರ ಎಲ್ಲಾ ದಿನವೂ ಶುಭಕರ.

### ೧.೪: ನಂಬಿಕೆ ಮತ್ತು ಜನಜೀವನ

ಪ್ರತಿ ಸಂಸ್ಕೃತಿಯು ಕೆಲವೊಂದು ನಂಬಿಕೆಗಳನ್ನು ಇಟ್ಟುಕೊಂಡಿದೆ. ಹಾಗಾಗಿ ಜೀವನಕ್ಕೂ ಮತ್ತು ನಂಬಿಕೆಗೂ ನಿಕಟವಾದ ಸಂಬಂಧವಿದ್ದು, ಅವೆರಡೂ ಹಾಸು

ಹೊಕ್ಕಾಗಿವೆ. ಜಾತಿ, ವೃತ್ತಿ, ಅಂತಸ್ತುಗಳ ಭೇದವಿಲ್ಲದೆ ಎಲ್ಲರ ಜೀವನದಲ್ಲಿ ಸೇರಿಕೊಂಡಿವೆ. ಮಾನವನ ಬದುಕಿನ ಮೊದಲಪುಟದಿಂದ ಹಿಡಿದು ಆಧುನಿಕ ಜಗತ್ತಿನವರೆಗೂ ನಂಬಿಕೆಗಳು ಹುಟ್ಟುತ್ತಾ ಬಂದಿವೆ. ಉದಾಹರಣೆಗೆ: ರೇಷ್ಮೆ ಗೂಡುಗಳು ಇರುವ ಜಾಗದಲ್ಲಿ ಮುಟ್ಟಾದ ಸ್ತ್ರೀ ಹೋಗಬಾರದು ಎಂಬುದು. ನಂಬಿಕೆಗಳು ಜನರ ಜೀವನದಲ್ಲಿ ನಡೆದಾಡುವ ನಾಣ್ಯಗಳಿದ್ದಂತೆ. ಜನತೆಯ ಜೀವನಾನುಭವದ ಮೂಸೆಯಿಂದ ಮೂಡಿಬಂದು, ಬದುಕಿನಲ್ಲಿ ಬೆರೆತು ಪರಿಣಾಮಕಾರಿಯಾಗಿ ತಮ್ಮ ಪ್ರಭಾವಬೀರಿ ಇಂದಿಗೂ ಜೀವಂತವಾಗಿವೆ. ಆದಿಯಿಂದಲೂ ಮಾನವನ ಬದುಕಿನಲ್ಲಿ ಇವು ಎಷ್ಟುಮುಖ್ಯ ಎಂಬುದಕ್ಕೆ ನಂಬಿಕೆಗಳ ಬಗ್ಗೆ ಇರುವ ನಾಣ್ಣುಡಿಗಳನ್ನು ನೋಡಿದರೆ ಗೊತ್ತಾಗುತ್ತದೆ. ''ನಂಬಿಕೆ ಬೆಟ್ಟವನ್ನಾದರು ಕದಲಿಸಬಲ್ಲದು''.

ನಂಬಿಕೆಗಳು ವ್ಯಕ್ತಿಯ ಮತ್ತು ಸಮೂಹದ ಜೀವನದಲ್ಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಕೆಲವು ಸಾರಿ ವ್ಯಕ್ತಿಯ ಬದುಕಿನಲ್ಲಿ ಶ್ರದ್ಧೆಯನ್ನುಂಟು ಮಾಡುತ್ತವೆ. ವ್ಯಕ್ತಿಯ ಮನಸ್ಸಿನ ಮೇಲೆ ಪ್ರಭಾವವುಂಟುಮಾಡಿ ಆ ಮೂಲಕ ವ್ಯಕ್ತಿ ಕಾರ್ಯೋನ್ಮುಖನಾಗುವಂತೆ ಪ್ರೇರೇಪಿಸುತ್ತವೆ. ಇಂಥ ನಂಬಿಕೆಗಳು ವ್ಯಕ್ತಿಯ ಮುನ್ನಡೆಗೂ ತೊಡಕಾಗಬಹುದು. ಅಲ್ಲದೆ ಸಾಮರಸ್ಯದಿಂದ ಬಾಳಲು ಸಹ ತೊಂದರೆಯನ್ನುಂಟುಮಾಡುತ್ತವೆ.ನಂಬಿಕೆಗಳನ್ನು ನಾವು ನೋಡಿದಾಗ ಅವುಗಳಲ್ಲಿ ಬುದ್ಧಿಯ ಕಸರತ್ತು ಕಡಿಮೆ ಇದ್ದು ಭಾವವೇ ಜಾಸ್ತಿಯಾಗಿರುತ್ತವೆ. ಕೆಲವೊಂದು ನಂಬಿಕೆಗಳು ಅಮಾನವೀಯತೆಯನ್ನು ಒಳಗೊಂಡು ಸಮಾಜದ ಶಾಂತಿಗೂ ಮತ್ತು ವ್ಯಕ್ತಿಯ ಮಾನಸಿಕ ಶಾಂತಿಗೂ ಅಶಾಂತಿಯನ್ನು ತರುತ್ತವೆ. 'ಹೂತಿಟ್ಟ ಹಣ ಅಥವಾ ತಂದೆ, ತಾತನೋ ಸ್ವರ್ಗ ಸೇರಲು ರಕ್ತ ತರ್ಪಣೆಯಿಂದ ಸಾಧ್ಯ' ಎಂಬ ನಂಬಿಕೆಗಳು ಜನರನ್ನು ನರಬಲಿ ಕೊಡಲು ಪ್ರೇರೇಪಿಸುತ್ತವೆ. ಹೂತಿಟ್ಟ ಹಣಕ್ಕಾಗಿ ಸ್ವತ: ತಂದೆಯೇ ತನ್ನ ಮಕ್ಕಳನ್ನು ಬಲಿಕೊಟ್ಟ ನಿದರ್ಶನಗಳನ್ನು ನಾವು ಇತ್ತೀಚಿನವರೆಗೂ ಕೇಳಿದ್ದೇವೆ. ಭಾರತ ದೇಶದಲ್ಲಿ ಪ್ರಾಚೀನರು ಗ್ರಹಣಗಳಿಗೆ ಕಾರಣ ರಾಹು ಕೇತುಗಳೆಂಬ ರಾಕ್ಷಸರು ಸೂರ್ಯಚಂದ್ರರನ್ನು ನುಂಗುವುದೇ ಎಂದು ಊಹಿಸಿದ್ದರು. ಆ ಊಹೆಯನ್ನು ಸಮರ್ಥಿಸುವುದಕ್ಕೆ ಕತೆಗಳನ್ನು ಕಟ್ಟಿದರು.ಗ್ರಹಣಗಳು ಹೇಗೆ ಉಂಟಾಗುವುದೆಂಬುದನ್ನು ವೈಜ್ಞಾನಿಕ ರೀತಿಯಿಂದ ಅನೇಕ ಶತಮಾನಗಳ ಹಿಂದೆಯೇ ಕಂಡು ಹಿಡಿಯಲಾಯಿತು. ಆದರೂ ಕೋಟ್ಯಾಂತರ ಭಾರತೀಯರು ಈಗಲೂ ಸಹ ಗ್ರಹಣ ಬಿಟ್ಟಾಗ ನದಿಗೆ ಹೋಗಿ ಸ್ನಾನ ಮಾಡುವುದು, ತರ್ಪಣ ಬಿಡುವುದು, ಗ್ರಹಣ ಕಾಲದಲ್ಲಿ ಊಟ ಮಾಡದಿರುವುದು ಕಂಡುಬರುತ್ತದೆ.

ಅಷ್ಟ ಗ್ರಹಗಳು ೫ನೇ ಫೆಬ್ರವರಿ ೧೯೬೨ ರ ದಿವಸ ಸಮರೇಖೆಯಲ್ಲಿ ಕೂಡಿದವು. ಇದರ ದೆಶೆಯಿಂದ ಭೂಲೋಕದ ಅಂತ್ಯವು ಉಂಟಾಗುವುದೆಂದು ಹೆದರಿ ಜನಗಳು ದೇಶದ ನಾನಾ ಕಡೆ ನಿರಂತರ ಪೂಜೆಗಳನ್ನು ಮಾಡಿದರು. ಹೀಗೆಯೇ ರಾಹುಕಾಲದಲ್ಲಿ ಯಾವ ಕೆಲಸವನ್ನು ಮಾಡಬಾರದು, ಮಂಗಳವಾರ ಮತ್ತು ಅಮವಾಸ್ಯೆ ದಿವಸಗಳಲ್ಲಿ ಹೊಸ ಕೆಲಸಗಳನ್ನು ಕೈಗೊಳ್ಳಬಾರದೆಂದು, ಒಂಟಿ ಬ್ರಾಹ್ಮಣ, ವಿಧವೆಯನ್ನು ನೋಡಿದರೆ ಅಶುಭವೆಂದೂ, ಪ್ರಯಾಣ ಹೋಗುವಾಗ ಬೆಕ್ಕು ಅಡ್ಡಬರಬಾರದು, ಅಮವಾಸ್ಯೆಯ ದಿನ ಹುಟ್ಟಿದ ಮಕ್ಕಳು ಕಳ್ಳರಾಗುತ್ತಾರೆ, ಇತ್ಯಾದಿ ನಂಬಿಕೆಗಳನ್ನು ಜನರು ನಂಬುತ್ತಾರೆ. ಕನಸಿನಲ್ಲಿ ದೇವರನ್ನು ಅಥವಾ ಪಿತೃಗಳನ್ನು ನೋಡಿದೆವೆಂದೂ ಅವರಿಗೆ ಬಲಿಯನ್ನು ಕೊಟ್ಟರೆ ಅವರ ಕಷ್ಟಗಳೆಲ್ಲವು ಪರಿಹಾರವಾಗುವುದೆಂದು ನಂಬಿ ಅದರ ಪ್ರಕಾರ ಮಕ್ಕಳನ್ನು ಬಲಿ ಕೊಟ್ಟಿರುವ ಉದಾಹರಣೆಗಳು ಭಾರತದಲ್ಲಿ ಹೇರಳವಾಗಿ ದೊರೆಯುತ್ತವೆ. ಜಾತಿಯ ಕಪಿಮುಷ್ಟಿಯಲ್ಲಿ ಸಿಲುಕಿಕೊಳೆತ ಇಂಡಿಯಾದ ಮನಸ್ಸು ಜಾತಿಯನ್ನು ಯಥಾರೀತಿಯಲ್ಲಿ ಉಳಿಸಿಕೊಳ್ಳಲು ಹಲವಾರು ನಂಬಿಕೆಗಳನ್ನು ಆಚರಿಸುತ್ತಿರುವುದು ಕಂಡುಬರುತ್ತಿದೆ. ಹರಿಜನರನ್ನು ಮುಟ್ಟಿದರೆ ಅಪವಿತ್ರವೆಂದೂ, ಅವರು ಬಾವಿಗಳಲ್ಲಿ ನೀರು ತೆಗೆದುಕೊಂಡರೆ ಆ ನೀರು ಮಲೀನವಾಗುವುದೆಂದು, ಅವರ ಹಿಂದಿನ ಜನ್ಮಗಳಲ್ಲಿ ಅನೇಕ ದುಷ್ಕೃತ್ಯಗಳನ್ನು ಮಾಡಿ ಈಗ ಈ ಕುಲದಲ್ಲಿ ಹುಟ್ಟಿರುವರೆಂದೂ ಇರುವ ಇಂತಹ ನಂಬಿಕೆಗಳು ಬಹಳ ಕ್ರೂರವಾದವು. ಇದರಿಂದ ಕೋಟ್ಯಾಂತರ ಭಾರತೀಯರ ಜೀವನವು ಹಾಳಾಗಿರುವುದು. ಈ ವಿಷಯದಲ್ಲಿ ಕಾನೂನು ಬದಲಾಯಿಸಿದರೂ ನಂಬಿಕೆ ಮತ್ತು ಆಚಾರಗಳು ಮಾತ್ರ ಮುಖ್ಯವಾಗಿ ಹಳ್ಳಿಗಳಲ್ಲಿ ಯಾವ ಬದಲಾವಣೆಯನ್ನು ಇಂದಿಗೂ ಹೊಂದಿಲ್ಲ. ಜಾತಿಯ ವಿರುದ್ಧ ಗೊಡ್ಡು ಸಂಪ್ರದಾಯಗಳ ವಿರುದ್ಧ ಹನ್ನೆರಡನೇ ಶತಮಾನದಲ್ಲಿ ಕ್ರಾಂತಿಕಾರಿ ಹೋರಾಟ ಮಾಡಿದ ಬಸವಣ್ಣನ ಅನುಯಾಯಿಗಳು ಬೆಂಡಿಗೇರಿ, ತತ್ತೂರುಗಲ್ಲಿ ಹರಿಜನರಿಗೆ ಮಲ ತಿನ್ನಿಸುವ ಮೂಲಕ ಬಸವಣ್ಣನನ್ನು ಕೊಂದ ಘಟನೆಯನ್ನು ಗಮನಿಸಬಹುದು.

ಪವಾಡಗಳನ್ನು ನಂಬುವುದು. ಇದು ಎಲ್ಲಾ ಕಾಲದಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಹರಡಿಕೊಂಡಿರುವ ನಂಬಿಕೆ. ತತ್ವಶಾಸ್ತ್ರದ ಪ್ರಕಾರ, ವಿಜ್ಞಾನದ ಪ್ರಕಾರ, ಮತಧರ್ಮದ ಪ್ರಕಾರ ಪವಾಡಗಳು ಪ್ರಕೃತಿಯ ನಿಯಮಗಳಿಗೆ ವಿರುದ್ಧ. ಪ್ರಕೃತಿ ನಿಯಮಗಳನ್ನು ನಮ್ಮ ಅನುಭವವು, ವಿಜ್ಞಾನದ ಪರಿಶೋಧನೆಯೂ ತೋರಿಸಿಕೊಟ್ಟಿದೆ. ಆದರೂ ಪುರಾತನ ಕಾಲದಿಂದಲೂ ಮಾನವನು ಆಶ್ಚರ್ಯಕರವಾದ ಘಟನೆಯನ್ನು ನೋಡಿದರೆ ಅವು ಪ್ರಕೃತಿ ನಿಯಮಗಳಿಗೆ ವಿರುದ್ಧವಾದರೂ ಅವು

ದೇವರ ಅಸ್ತಿತ್ವಕ್ಕೆ ಒಂದು ಪ್ರತ್ಯೇಕ ನಿದರ್ಶನವೆಂದು ನಂಬುವರು. ದೇವರಲ್ಲಿ ನಂಬಿಕೆ ಇರದವರಿಗೆ ಪವಾಡಗಳಿಂದ ದೇವರ ಇರುವಿಕೆಯ ರುಜುವಾತು ಏಕೆ ಬೇಕು? ಪ್ರಕೃತಿಯ ನಿಯಮಗಳನ್ನು ದೇವರಿಂದ ನಿಯುಮಿತವಾದರೆ ದೇವರು ತನ್ನ ನಿಯಮಗಳನ್ನು ತಾನೇ ಏತಕ್ಕೆ ತಿರಸ್ಕರಿಸಬೇಕು? ದೇವರಲ್ಲಿ ನಂಬಿಕೆ ಇಟ್ಟಿರುವವರು ದೇವರನ್ನು ಪ್ರಾರ್ಥಿಸುವರು. ಪ್ರತೀಕವಾಗಿ ದೇವರಿಗೆ ಒಂದು ಆಕೃತಿ ಇದೆಯೆಂದು ನಂಬುವರು. ತಮ್ಮ ಊಹೆಯನ್ನು ಅನುಸರಿಸಿ ಒಂದು ಪ್ರತಿಮೆಯನ್ನು ಮಾಡುವರು. ಆ ಪ್ರತಿಮೆಯ ಛಾಯಚಿತ್ರದಿಂದ ವಿಭೂತಿಯು ಬಿದ್ದರೆ ದೇವರಲ್ಲಿ ಮತ್ತಷ್ಟು ನಂಬಿಕೆ ಹೆಚ್ಚುವುದೆಂದುಕೊಳ್ಳುವರು. ಹೀಗೆ ನಂಬಿಕೆಗಳಿಗೆ ಮಿತಿಯೇ ಇಲ್ಲ. ಇದರ ವಿರುದ್ಧವಾಗಿ ವಿಚಾರ ಮಾಡಿದವರ ಮೇಲೆ ಕೋಪ ಮಾಡಿಕೊಳ್ಳುತ್ತಾರೆ.

ನಂಬಿಕೆಯನ್ನೇ ಕಳೆದುಕೊಂಡ ವ್ಯಕ್ತಿಗೆ ಪರಮ ಪೂಜ್ಯವೆಂದು ನಂಬಿ ಪೂಜಿಸುತ್ತಿದ್ದ ದೇವರ ಪ್ರತಿಮೆಯು ಕೇವಲ ಕಲ್ಲಿನಂತೆ ಭಾಸವಾಗುತ್ತದೆ ಎಂಬ ಎಂ.ನಂಜಮ್ಮಣ್ಣಿಯವರ ಮಾತಿನಂತೆ, ನಂಬಿಕೆಗಳನ್ನು ವೈಚಾರಿಕ ಹಿನ್ನಲೆಯಲ್ಲಿ ವಿಶ್ಲೇಷಿಸಿ ಉಪಯೋಗ ವಿಲ್ಲದವುಗಳನ್ನು ಬಿಡುವುದು ಉತ್ತಮ. ಹೀಗೆ ಮಾಡುವ ಮೂಲಕ ಜಾತಿ, ಅಸ್ಪೃಶ್ಯತೆ, ದೇವರು, ಧರ್ಮದ ಹೆಸರಿನಲ್ಲಿ ನಡೆಯುವ ಅನ್ಯಾಯ, ಹಿಂಸೆ, ಮೋಸ, ವಂಚನೆಗಳನ್ನು ಕಡಿಮೆ ಮಾಡಿ, ನೆಮ್ಮದಿಯ ಜೀವನವನ್ನು ಸಾಗಿಸಬಹುದು.

ನಂಬಿಕೆಗಳ ಸಹಾಯವಿಲ್ಲದೆ ಬದುಕುವ ಮಾನಸಿಕ ಗಟ್ಟಿತನ ಎಲ್ಲರಿಗೂ ಸಾಧ್ಯವಾಗಲಾರದು. ಅನೇಕರು ಬದುಕುವ ಪರಿಸರ, ಅವರ ತಿಳುವಳಿಕೆಯ ಇತಿಮಿತಿ ಮುಂತಾದ ಸಂಗತಿಗಳು ಅವರ ಬದುಕಿನಲ್ಲಿ ಕೆಲವಾರು ನಂಬಿಕೆಗಳನ್ನು ಅವಲಂಬಿಸಲು ಕಾರಣವಾಗಬಹುದು. ಆದರೆ ಮನುಷ್ಯನ ಹಾಗು ಅವನು ಬದುಕುತ್ತಿರುವ ಸಮಾಜಕ್ಕೆ ಅಪಾಯಕಾರಿಯಾದ ಅನೇಕ ಧಾರ್ಮಿಕ ನಂಬಿಕೆಗಳು ಜಾತಿ, ಅಸ್ಪೃಶ್ಯತೆ ಗಂಡು ಹೆಣ್ಣಿನ ಅಂತರ ಮುಂತಾದ ಸಾಮಾಜಿಕ ಅಸಮಾನತೆಗಳನ್ನು ಪೋಷಿಸುವ ಸಾಂಸ್ಕೃತಿಕ ನಂಬಿಕೆಗಳು, ವ್ಯಕ್ತಿಯ ಮನಸ್ಸಿನಲ್ಲಿ ಸದಾ ಭಯದ ಅಸ್ಥಿರತೆಯ ವಾತಾವರಣವನ್ನು ಉಂಟು ಮಾಡುವ ವೈಯಕ್ತಿಕ ನಂಬಿಕೆಗಳು ಇವುಗಳನ್ನು ಸಂಪೂರ್ಣ ತೊಡೆದು ಹಾಕುವುದು ಪ್ರತಿಯೊಬ್ಬ ವ್ಯಕ್ತಿಯ ಕರ್ತವ್ಯವಾಗಬೇಕು. ಜನಪದರು ತಾವು ಒಪ್ಪಿಕೊಂಡ ಮೌಲ್ಯಗಳು ಅವರ ಪಾಲಿಗೆ ಪ್ರಶ್ನಾತೀತವಾಗಿದ್ದವು. ಮೌಲ್ಯಗಳ ಸ್ವಯಂಪೂರ್ಣತೆಯನ್ನು ಪ್ರಶ್ನಿಸುವ ವೈಚಾರಿಕ ಸ್ವೋಪಜ್ಞತೆಯಾಗಲಿ, ಧಾರ್ಷ್ಟ್ಯವಾಗಲಿ ಅವರಿಗೆ ಇರಲಿಲ್ಲ. ನಂಬಿಕೆಗಳು ಹುಟ್ಟಿದ ಸಾಂಸ್ಕೃತಿಕ ಸಂದರ್ಭ, ಅವು ನೆರವೇರಿಸುತ್ತಿದ್ದ ಸಾಮಾಜಿಕ ಪರಿಸರ . ಕಾರ್ಯಗಳ ಪರಿಸರ ಇಂದು ಸಾಮಾನ್ಯವಾಗಿ

ಇಲ್ಲ. ಆದ್ದರಿಂದ ಅಂತಹ ಜನಪದ ನಂಬಿಕೆಗಳು ಇಂದು ಅಗತ್ಯವಿಲ್ಲ ಎನ್ನುವುದನ್ನು ವೈಜ್ಞಾನಿಕವಾಗಿ ಆಲೋಚಿಸಿ ತಿಳಿದುಕೊಳ್ಳಬೇಕಾಗಿದೆ.

**೧.೫: ನಂಬಿಕೆ ಮತ್ತು ಸಂಸ್ಕೃತಿ**

ಜನರ ಪ್ರತಿಯೊಂದು ಕೆಲಸಕಾರ್ಯ, ಆಲೋಚನೆ, ರೂಢಿಸಂಪ್ರದಾಯ, ಜೀವನಕ್ರಮಗಳೆಲ್ಲವೂ ಮೂಲಭೂತವಾದ ನಂಬಿಕೆಗಳಿಂದ, ಅದರ ಉಪನಂಬಿಕೆಗಳಿಂದ ಆಧಾರ ಪಡೆದಿವೆ. ಮುಖ್ಯವಾಗಿ ಪ್ರಕೃತಿಯ ಒಲವು ಪ್ರಕೋಪಗಳನ್ನು ಗಮನಿಸುತ್ತ ನಿಸರ್ಗದ ಪ್ರೇಮ ಭೀತಿಗಳನ್ನು ಮನುಷ್ಯ ಬೆಳೆಸಿಕೊಂಡು ಸಾಮಾಜಿಕವಾಗಿ ಅದಕ್ಕೆ ಅರ್ಥಕಲ್ಪಿಸಿ ಅದರ ಹಿನ್ನೆಲೆಯಲ್ಲಿ ಅಡಗಿರುವ ಶಕ್ತಿಯೊಂದನ್ನು ದೇವರೆಂದು ಕಲ್ಪಿಸಿಕೊಂಡು. ಅದನ್ನು ಒಲಿಸಿಕೊಳ್ಳಲು ಅವನು ಹಲವು ಪ್ರಯತ್ನಗಳನ್ನು ಮಾಡುವುದು, ನಂಬಿಕೆಗಳಿಗೆ ಕಾರಣವಾಗುತ್ತದೆ. ಅಂದರೆ ಜನರು ಜೀವಿಸಿದಂತೆ ಅವರ ಸಂಸ್ಕೃತಿ ಇರುತ್ತದೆ. ಇದು ಮಾನವ ಜಾತಿಯ ಸಾವಿರಾರು ವರ್ಷಗಳ ಬಾಳಿನ ಅನುಭವ,ಆಲೋಚನಾ ಫಲ, ನಂಬಿಕೆಗಳು, ನಡವಳಿಕೆಗಳು ಮುಂತಾದವುಗಳನ್ನು ನಾವು ಸಂಸ್ಕೃತಿಯ ಮೂಲವೆಂದು ತಿಳಿಯಬಹುದು. ಸಂಸ್ಕೃತಿ ಎಂಬುದು ಮಾತಿಗೆ ನಿಲುಕದೆ, ಜನರ ಆಚರಣೆಯ ರೀತಿ ನೀತಿಗಳಿಂದ ಅನುಭವಕ್ಕೆ ಗೋಚರವಾಗುವ ವಿಷಯ. ಈ ಸಂಸ್ಕೃತಿಯು ವ್ಯಕ್ತಿಗಾಗಲಿ, ಸಮಾಜಕ್ಕಾಗಲಿ ಒಂದೇ ದಿನ ಒಟ್ಟು ಗೂಡಿ ಬರತಕ್ಕದ್ದಲ್ಲ, ಹಲವಾರು ದಿನಗಳ ಪ್ರಯತ್ನದ ಫಲವಾಗಿ ಸಮಾಜಕ್ಕೆ ಕೂಡಿಬರುವ ವಿಶೇಷವನ್ನು ಸಂಸ್ಕೃತಿ ಯೆನ್ನಬಹುದು.

ಸಂಸ್ಕೃತಿಯನ್ನು ವಿದ್ವಾಂಸರು ಮೂರು ಬಗೆಗಳಲ್ಲಿ ವರ್ಗೀಕರಿಸಿದ್ದಾರೆ. ಅವುಗಳು ಆದಿವಾಸಿ ಸಂಸ್ಕೃತಿ, ಮಧ್ಯಮ ಮತ್ತು ಪ್ರೌಢ ಸಂಸ್ಕೃತಿ.

ಆದಿವಾಸಿ ಸಂಸ್ಕೃತಿಯ ಜನರ ಜೀವನದ ಪ್ರತಿಯೊಂದು ಘಟಕದಲ್ಲೂ ನಂಬಿಕೆ ಮತ್ತು ಸಂಪ್ರದಾಯಗಳು ಆ ಜನರ ಜೀವನವನ್ನು ನಿರ್ದೇಶಿಸುತ್ತವೆ. ಇಂತಹ ನಂಬಿಕೆ ಮತ್ತು ಸಂಪ್ರದಾಯಗಳು ಗಂಡಸರಿಗಿಂತ ಸ್ತ್ರೀಯರಲ್ಲಿ ಹೆಚ್ಚಾಗಿ ಮನೆ ಮಾಡಿಕೊಂಡಿರುತ್ತವೆ. ಸಾಮಾನ್ಯವಾಗಿ ಆದಿವಾಸಿಗಳಲ್ಲಿ ಮಾತೃವೇ ಕುಟುಂಬಕ್ಕೆ ಮುಖ್ಯವಾದುದರಿಂದ ಮತ್ತು ಮೂಲದಲ್ಲಿ ಕೃಷಿಯು ಸ್ತ್ರೀಯ ಶೋಧವಾದ್ದರಿಂದ ತಾರ್ಕಿಕವಾಗಿ ಕೃಷಿಯ ಯಾಂತ್ರಿಕ ಆಚರಣೆ, ನಂಬಿಕೆಗಳು ಸ್ತ್ರೀಯಿಂದಲೇ ಹುಟ್ಟಿಕೊಂಡಿರುತ್ತವೆ ಮತ್ತು ಅವುಗಳ ರಕ್ಷಕರು, ಬೆಳೆಗಾರರು, ಅವರೇ ಆಗಿರುತ್ತಾರೆ. ಕೃಷಿ ವಿಧಿಗಳಿಂದ ಹುಟ್ಟಿಕೊಂಡ ತಂತ್ರಪಂಥ ಸಹ ಮೂಲದಲ್ಲಿ ಮಹಿಳೆಯರು ಮಾತ್ರ ಆಚರಿಸುತ್ತಿದ್ದವುಗಳಾಗಿರಬೇಕು. ಜೊತೆಗೆ ಮಾಂತ್ರಿಕ ವಿಧಿಗಳು ಸಹ ಸ್ತ್ರೀಯರಿಂದಲೇ

ಹುಟ್ಟಿಕೊಂಡಿರಬಹುದು, ಇದನ್ನು ಎಲ್ಲಾ ದೇಶಗಳಲ್ಲೂ ಕಾಣಬಹುದು.

ಮಧ್ಯಮ ಸಂಸ್ಕೃತಿಯು ಗ್ರಾಮಗಳಲ್ಲಿ ಕಾಣಿಸಿಕೊಳ್ಳುವಂತಹದ್ದು. ಇಲ್ಲಿಯ ಜನರು ಪರಸ್ಪರಾವಲಂಬನೆಯುಳ್ಳವರು. ಇಲ್ಲಿಯ ಸಂಸ್ಕೃತಿಯಲ್ಲಿ ಸಾಮಾನ್ಯವಾಗಿ ವ್ಯವಸಾಯವು ಪ್ರಮುಖ ಉದ್ಯೋಗವಾಗಿರುತ್ತದೆ. ಈ ಸಂಸ್ಕೃತಿಯಲ್ಲಿ ಜನನದಿಂದ ಹಿಡಿದು ಸಾಯುವತನಕ, ಜೊತೆಗೆ ತಮ್ಮ ಪ್ರತಿಯೊಂದು ಕಾರ್ಯದಲ್ಲೂ ಸಾಮಾನ್ಯವಾಗಿ ನಂಬಿಕೆಗಳಿಗೆ ಜನರು ಅಂಟಿಕೊಂಡಿರುತ್ತಾರೆ. ಇಲ್ಲಿಯ ಜನರು ತಮ್ಮ ಜೀವನದ ಪ್ರತಿಯೊಂದು ಘಟ್ಟದಲ್ಲೂ ನಂಬಿಕೆಗಳನ್ನು ನಂಬಿಕೊಂಡು ಅವುಗಳನ್ನು ಸಾಮಾನ್ಯವಾಗಿ ತಪ್ಪದೇ ಆಚರಿಸುತ್ತಾರೆ. ಬೆಳಿಗ್ಗೆ ಏಳುವಾಗಲಿಂದ ಹಿಡಿದು ಸಂಜೆಯವರೆಗೂ ನಂಬಿಕೆಗಳ ಆಧಾರದ ಮೇಲೆ ತಮ್ಮ ಜೀವನವನ್ನು ನಡೆಸುತ್ತಾರೆ.

ಬೆಳಿಗ್ಗೆ 'ಏಳುವಾಗ ಬಲ ಮಗ್ಗುಲಿಗೆ ಏಳಬೇಕು, ಮಲಗುವಾಗ ಎಡ ಮಗ್ಗುಲಿಗೆ ಮಲಗಬೇಕು' ಹಾಗೆಯೇ ತಮ್ಮ ಮಕ್ಕಳು ಮರಿಗಳಿಗೆ ದೃಷ್ಟಿಯಾಗಬಾರದೆಂದು ಇಳಿ ತೆಗೆಯುವುದು, ಇನ್ನೂ ಮುಂತಾದ ನಂಬಿಕೆಗಳನ್ನು ಹೊಂದಿರುತ್ತಾರೆ. ಅಲ್ಲದೆ ನಂಬಿಕೆಯನ್ನು ಭದ್ರಗೊಳಿಸಲು ಹರಕೆ, ಮುಡಿ, ಕಾಣಿಕೆಗಳನ್ನು ದೇವರಿಗೆ ಸಲ್ಲಿಸಲಾಗುತ್ತದೆ.

ಮಧ್ಯಮ ಸಂಸ್ಕೃತಿಯ ಜನರು ಸೃಷ್ಟಿಸಿಕೊಂಡಂತಹ ನಂಬಿಕೆಗಳು ಈಗಲೂ ಸಹ ನಡೆದಾಡುವ ನಾಣ್ಯಗಳಂತೆ ಬಹುಮುಖ್ಯ ಪಾತ್ರವಹಿಸುತ್ತವೆ. ಇವುಗಳನ್ನು ಬಿಟ್ಟು, ಮಧ್ಯಮ ಸಂಸ್ಕೃತಿಯ ಜನರು ಬದುಕಲು ಸಾಧ್ಯವಿಲ್ಲವೋ ಎನ್ನುವಷ್ಟರಮಟ್ಟಿಗೆ ಕಂಡುಬರುತ್ತದೆ. ಹಾಗೆಯೇ ಮಧ್ಯಮ ಸಂಸ್ಕೃತಿಯ ಜನರೂ ನಂಬಿಕೆಗಳನ್ನು ಅನಿವಾರ್ಯ ಎನ್ನುವಷ್ಟರ ಮಟ್ಟಿಗೆ ನಂಬಿ; ಅದರಂತೆ ನಡೆದುಕೊಳ್ಳುತ್ತಾರೆ.

ಪ್ರೌಢ ಸಂಸ್ಕೃತಿಯಲ್ಲಿ ಜಾತಿಯ ಏಣಿಶ್ರೇಣಿಯಿದೆ. ಧಾರ್ಮಿಕ ಸ್ಥಾನಮಾನ, ಕ್ರಿಯಾವಿಧಿಗಳು, ವಿಧಿ ನಿಷೇಧಗಳು, ಸ್ಪೃಶ್ಯಾಸ್ಪೃಶ್ಯತೆ, ವಿವಾಹ, ವೃತ್ತಿ ಹಾಗೂ ಆಹಾರಗಳ ಮೇಲಿನ ನಿರ್ಬಂಧ ಮುಂತಾದ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ವಿವಿಧ ಜಾತಿ ಗುಂಪುಗಳನ್ನು ಕಾಣಬಹುದು. ಆಯಾ ಜಾತಿಗಳು ಆಯಾ ಜಾತಿಗಳಲ್ಲೇ ಹೆಚ್ಚಾಗಿ ಸಂಬಂಧವನ್ನೇರ್ಪಡಿಸಿಕೊಳ್ಳುತ್ತಾರೆ. ಇಂತಹ ಪ್ರೌಢ ಸಂಸ್ಕೃತಿಯಲ್ಲಿ ಎರಡು ನಂಬಿಕೆಗಳು ಮುಖ್ಯವಾಗಿರುತ್ತವೆ. ತಾವು ತಮ್ಮ ಜಾತಿಯವರು ಮೇಲ್ಪಟ್ಟವರು ಮತ್ತು ಉಳಿದ ಜಾತಿಗಳು ಕೀಳು ಎಂಬ ಮನೋಭಾವವಿರುತ್ತದೆ. ಇದು ಮೇಲ್ಜಾತಿಗಳಲ್ಲಿ ತುಂಬಾ ಇರುತ್ತದೆ. ಹಾಗಾಗಿ ಇವರ ಆಲೋಚನೆ, ಚಿಂತನೆಗಳು ಮೇಲ್ಮುಖವಾಗಿರುತ್ತವೆ. ಜನಾಂಗಿಕವಾಗಿರುವುದಿಲ್ಲ ಅಥವಾ ಜನಪರವಾಗಿರುವುದಿಲ್ಲ.

ಉದಾ: ಸ್ವರ್ಗ, ದೇವರು, ದೈವತ್ವದ ಬಗ್ಗೆ ಯೋಚನೆಯಲ್ಲಿರುತ್ತಾರೆ. ಈ ಪ್ರೌಢ ಸಂಸ್ಕೃತಿಯಲ್ಲಿನ ನಂಬಿಕೆಗಳು ನಂಬಿಕೆಯ ಮೇಲಿನ ನಂಬಿಕೆಗಳಂತೆ ಕಾಣುತ್ತವೆ. ಇವು ಧರ್ಮ ಅಥವಾ ವ್ಯಕ್ತಿಯೊಬ್ಬನನ್ನು ಆಧಾರ ಮಾಡಿಕೊಂಡು ಆ ಧರ್ಮ ಅಥವಾ ವ್ಯಕ್ತಿಯಿಂದ ಬೋಧೆಯಾದ ನಡವಳಿಕೆಗಳು. ಈ ಧರ್ಮ ಅಥವಾ ವ್ಯಕ್ತಿಗಳ ಹುಟ್ಟು, ಪವಾಡ ಪುರುಷರು ಎನಿಸಿಕೊಳ್ಳುವುದಕ್ಕೆ ಮೊದಲು ಜನಪದರಲ್ಲಿ ನಂಬಿಕೆಗಳಿದ್ದವು. ನಂಬಿದ ಮತ್ತು ನಂಬಿದ್ದನ್ನು ಬಲವಾಗಿ ಆಚರಿಸುವ ಪ್ರವೃತ್ತಿ ಆಗಲೇ ಜನಗಳಲ್ಲಿ ಬೇರೂರಿತು. ಈ ಮನೋಧರ್ಮವನ್ನು ಅರಿತ ಪ್ರೌಢ ಸಂಸ್ಕೃತಿ ತಮ್ಮದೇ ರೀತಿಯ ನಂಬಿಕೆಗಳನ್ನು ನಂಬಿಕೆ ಪ್ರಕ್ರಿಯೆಯೊಳಕ್ಕೆ ಸೇರಿಸಿದರು. ಮೂಲ ಪ್ರಕ್ರಿಯೆಯನ್ನು ಉಳಿಸಿಕೊಂಡರು. ಆದರೆ ಆ ಮೂಲ ಪ್ರಕ್ರಿಯೆಯೊಳಗೆ ಇದ್ದ ಜನಪದ ನಂಬಿಕೆಗಳನ್ನು ತೆಗೆದುಹಾಕಿದರು. ಮೂಲ ನಂಬಿಕೆಯನ್ನು ಸೇರಿಸಿ ತಮ್ಮ ಧರ್ಮದ ಘಟ್ಟಿತನಕ್ಕಾಗಿ ಅವನ್ನು ಬಳಸಿಕೊಂಡರು. ಇದರಿಂದ ನಮಗೆ ಸ್ಪಷ್ಟವಾಗುವುದೆಂದರೆ ಪ್ರೌಢ ಸಂಸ್ಕೃತಿ ಮೂಲ ನಂಬಿಕೆಯ ಮೇಲೆ ತನ್ನ ನಂಬಿಕೆಯನ್ನು ಸೃಷ್ಟಿಸಿಕೊಂಡ ಯಜಮಾನ ನಂಬಿಕೆಯ ಸಂಸ್ಕೃತಿ ಎನ್ನಬಹುದು.

### ೧.೬: ನಂಬಿಕೆ ಮತ್ತು ಆಚರಣೆ, ಸಂಪ್ರದಾಯ

ಜನಪದರ ಬದುಕಿನಲ್ಲಿ ಆಚರಣೆ, ಅವಿಭಾಜ್ಯ ಅಂಗವಾಗಿದೆ. ಅದು ಕಾಲಮಾನಕ್ಕೆ ತಕ್ಕಹಾಗೆ ಬದಲಾವಣೆಗೊಳ್ಳುತ್ತ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ನಿರಂತರವಾಗಿ ಸಾಗಿ ಬಂದಿದೆ. ಮನುಷ್ಯ ತಾನು ನಡೆದುಕೊಂಡು ಬಂದ ವಿಶಿಷ್ಟ ಆಚರಣೆಗಳ ಬಗ್ಗೆ ಹೊಂದಿದ ಶ್ರದ್ಧೆ, ಉತ್ಸಾಹ ನಂಬಿಕೆಗಳು ಸಂಪ್ರದಾಯದ ಸೃಷ್ಟಿಗೆ ಕಾರಣವಾದವು. ಇಂತಹ ಸಂಪ್ರದಾಯ ಆಚರಣೆಗಳು ತಲೆ ಮಾರಿನಿಂದ ತಲೆಮಾರಿಗೆ ಹರಿಯುತ್ತಾ ಬಂದವು. ಭಾರತದಲ್ಲಿ ಆಚರಣೆಯಲ್ಲಿರುವ ಬಹುತೇಕ ಹಬ್ಬಗಳು ಕೃಷಿಯ ಕ್ರಿಯಾಚರಣೆಯ ಹಿನ್ನೆಲೆಯಲ್ಲಿ ಮೂಡಿ ಬಂದವುಗಳಾಗಿವೆ. ಕೃಷಿ ಬದುಕಿನಲ್ಲಿ ಮಳೆಗೆ ಹೆಚ್ಚು ಪ್ರಾಧಾನ್ಯತೆ ಇರುವುದರಿಂದ ಮಳೆಗೆ ಸಂಬಂಧಿಸಿದ ವಿಧಿ,ಆಚರಣೆಗಳು ರೂಢಿಯಲ್ಲಿ ಇವೆ. ನಂಬಿಕೆ ಆಚರಣೆಗಳು ಬಹುತೇಕವಾಗಿ ಪ್ರಕೃತಿ ಮೂಲದವು. ಆದ್ದರಿಂದ ಇಲ್ಲಿ ಬದುಕಬೇಕಾಗಿದ್ದ ಮಾನವ ಭಯ ಭಕ್ತಿಗಳಿಂದ ಮತ್ತು ಮನಸ್ಸಿನ ಅಸ್ಥಿರ ಭಾವನೆಗಳಿಂದ ದೈವಿಕ ನಂಬಿಕೆಗಳನ್ನು ಆಚರಣೆಯ ಕ್ರಮದಲ್ಲಿ ಉಳಿಸಿಕೊಂಡಿದ್ದಾನೆ. ಅಗೋಚರವಾದ ಶಕ್ತಿಗಳನ್ನು ವಶಪಡಿಸಿಕೊಳ್ಳಲು ಅವುಗಳ ಕ್ರೂರ ದೃಷ್ಟಿಯಿಂದ ಪಾರಾಗಲು ಅವುಗಳ ಬಗ್ಗೆ ಇರುವ ನಂಬಿಕೆ, ಭಯ ಭಕ್ತಿಗಳನ್ನೊಳಗೊಂಡ ಆಚರಣೆಗಳು ಅನೇಕ ವಿಧಗಳಲ್ಲಿ ಅವುಗಳಿಗೆ ತೃಪ್ತಿ ಪಡಿಸುವ

ಸಲುವಾಗಿ ಬೆಳೆದುಕೊಂಡು ಬಂದಿವೆ. ಉದಾ: 'ಸತ್ತವರಿಗೆ ತಿಥಿ ಮಾಡದೆ ಹೋದರೆ ದೆವ್ವಗಳಾಗಿ ಕಾಡುತ್ತಾರೆ' ಎಂಬ ನಂಬಿಕೆ. 'ತಿಥಿ' ಮಾಡುವುದು ಇಲ್ಲಿ ಸಾಂಪ್ರದಾಯಿಕ, ಮಾಡದೆ ಹೋದರೆ ದೆವ್ವಗಳಾಗಿ ಕಾಡುವ ಭಯ, ಇದರಿಂದಲೇ ಸಾಂಪ್ರದಾಯಿಕತೆಯನ್ನು ಉಳಿಸಿಕೊಂಡಿರುವುದು. ಒಟ್ಟಿನಲ್ಲಿ ನಂಬಿಕೆ ಆಚರಣೆಗಳಿಗೆ ಪರಸ್ಪರ ಸಂಬಂಧವಿದ್ದು ಒಂದನ್ನೊಂದು ಪ್ರತಿನಿಧಿಸುತ್ತವೆ.

ಭಾವನೆ ಮತ್ತು ಆಲೋಚನೆಯ ರೂಪದಲ್ಲಿ ನಂಬಿಕೆ ಇದ್ದರೆ, ಕ್ರಿಯಾ ರೂಪದಲ್ಲಿ ಆಚರಣೆ ಇರುತ್ತದೆ. ನಂಬಿಕೆಗಳು ಆಚರಣೆಗಳಿಗೆ ಶಾಸನ ಪ್ರಾಯವಾಗಿ ಇರುವುದೇ ಅಲ್ಲದೇ ಅವು ಸುರಕ್ಷಿತವಾಗಿ ಮುನ್ನಡೆದುಕೊಂಡು ಹೋಗಲು ಸಹಕಾರಿಯಾಗಿಯೂ ಇವೆ ಎನ್ನಬಹುದು. ಒಟ್ಟಿನಲ್ಲಿ ನಂಬಿಕೆಗಳು ಮತ್ತು ಆಚರಣೆಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ.

ಒಂದು ಜನಾಂಗದ ಸಂಸ್ಕಾರ, ವಿಶೇಷವಾದ ಭದ್ರ ಬುನಾದಿಯ ಮೇಲೆ ರೂಪಿತಗೊಂಡು ಪರಂಪರಾಗತವಾಗಿ ಒಂದು ತಲೆ ಮಾರಿನಿಂದ ಮತ್ತೊಂದು ತಲೆಮಾರಿಗೆ ಆ ಸಮಾಜದಲ್ಲಿ ಮುಂದುವರಿಯುವ ವಿಶಿಷ್ಟ ಆಚರಣೆ ಪದ್ಧತಿಗಳೇ ಸಂಪ್ರದಾಯಗಳೆನಿಸುತ್ತವೆ. ನಂಬಿಕೆಗಳಿಗೂ ಸಂಪ್ರದಾಯಗಳಿಗೂ ಸಾವಯವ ಸಂಬಂಧವಿದೆ. ಇವು ಪರಸ್ಪರ ಪೂರಕ ವಿಷಯಗಳು. ಜನಾಂಗದ ಸಂಸ್ಕೃತಿಯಲ್ಲಿ ಆಳವಾಗಿ ಬೇರು ಬಿಟ್ಟಿದ್ದು, ಜನ ಜೀವನವನ್ನು ನಿರ್ದೇಶಿಸುವ ಶಕ್ತತೆಯನ್ನು ಪಡೆದಿರುತ್ತವೆ. ಜನರ ಬದುಕಿಗೂ, ನಂಬಿಕೆ ಹಾಗೂ ಸಂಪ್ರದಾಯಗಳಿಗೂ ನಡುವೆ ಇರುವ ಬಾಂಧವ್ಯ ನಿಕಟವಾದದ್ದು. ಇವು ಬಾಳಿನ ಅವಿಭಾಜ್ಯ ಅಂಗಗಳಾಗಿಯೂ ಕೆಲಸ ನಿರ್ವಹಿಸುತ್ತವೆ. ಮನುಷ್ಯ ಬದುಕಲು ಅನಿವಾರ್ಯವಾಗಿ ಬೇಕಾದ ಮಾನಸಿಕ ಬಲ ಮತ್ತು 'ರೂಢಿ' ಗಳು ಕ್ರಮವಾಗಿ ನಂಬಿಕೆ ಮತ್ತು ಸಂಪ್ರದಾಯಗಳಿಂದ ಪ್ರೇರಿತವಾದವು.

ನಂಬಿಕೆಗಳು ಸಂಪ್ರದಾಯ ಉಳಿಯಲು ಸಹಕರಿಸುತ್ತವೆ. ಇವಿಲ್ಲದಿದ್ದ ಪಕ್ಷದಲ್ಲಿ ಸಂಸ್ಕೃತಿಯೂ ಇರುತ್ತಿರಲಿಲ್ಲ. ಸೋಸ್ ಮಾರಿ ಹಬ್ಬ, ಗ್ರಾಮದೇವತೆ ಹಬ್ಬ ಮುಂತಾದವುಗಳ ಜೊತೆಗೆ ಮಾನವ ಸಂಬಂಧಿಯಾದ ಯಾವುದೇ ವಿಧಿಗಳಿಗೆಲ್ಲ ಈ ನಂಬಿಕೆಗಳೇ ಕಾರಣ. ಈ ನಂಬಿಕೆಗಳಿಂದ ಗೊಡ್ಡು ಹಾಗೂ ಉತ್ತಮ ಸಂಪ್ರದಾಯಗಳು ಅಸ್ತಿತ್ವಕ್ಕೆ ಬರುತ್ತವೆ. ಕೆಲವೊಮ್ಮೆ ನಂಬಿಕೆಗಳು ಯಜಮಾನ ಸಂಸ್ಕೃತಿಯ ಸಂಪತ್ತು ಮತ್ತು ಒಂದು ಸಮಾಜ ವ್ಯವಸ್ಥೆಯ ಅಸ್ತಿತ್ವವನ್ನು ಕಾಪಾಡುವುದಕ್ಕಾಗಿ ಆಗಾಗ್ಗೆ ಸೃಷ್ಟಿಗೊಳ್ಳುತ್ತವೆ. ಹಾಗೆ ಸೃಷ್ಟಿಗೊಂಡದ್ದು ಜನಮನದಲ್ಲಿ

ಹಾಸುಹೊಕ್ಕಾಗಿ, ಅವರನ್ನು ಸಂಪ್ರದಾಯಸ್ಥರನ್ನಾಗಿ ಮಾರ್ಪಡಿಸುತ್ತದೆ. ಹಳೆಯ ಸಂಪ್ರದಾಯಗಳೆಲ್ಲ ನಂಬಿಕೆಗಳಿಂದ ಮೂಡಿ ಬಂದವುಗಳು. ಆದ್ದರಿಂದ ಸಂಪ್ರದಾಯಗಳನ್ನುಳಿದು ನಂಬಿಕೆಗಳಿಲ್ಲ. ನಂಬಿಕೆಗಳನ್ನುಳಿದು ಸಂಪ್ರದಾಯಗಳಿಲ್ಲ. ಅವೆರಡೂ ಪರಸ್ಪರ ಪೂರಕವಾಗಿದ್ದು, ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಸಂಪ್ರದಾಯಗಳನ್ನು ಕುರಿತು ವಿವೇಚಿಸುವಾಗ ನಂಬಿಕೆಗಳ ನೆರವನ್ನೂ, ನಂಬಿಕೆಗಳನ್ನು ವಿಶ್ಲೇಷಿಸುವಾಗ ಸಂಪ್ರದಾಯದ ಸಹಾಯವನ್ನು ನಿರೀಕ್ಷಿಸಬೇಕಾಗುತ್ತದೆ. ಏಕೆಂದರೆ ನಂಬಿಕೆಗಳೇ ಸಂಪ್ರದಾಯಗಳಿಗೆ ಮೂಲ ಅವುಗಳ ಗರ್ಭದಲ್ಲಿ ಭ್ರೂಣಾವಸ್ಥೆಯಲ್ಲಿ ಸುಪ್ತಗೊಂಡಿರುವ ಸಂಪ್ರದಾಯಗಳು ಕಾಲಕ್ರಮೇಣ ಅನುಕೂಲ ಸನ್ನಿವೇಶಗಳೊದಗಿದ ಕೂಡಲೇ ಮೂರ್ತಿವತ್ತಾಗಿ ಪ್ರಕಟಗೊಳ್ಳುತ್ತವೆ. ಮನುಕುಲದ ಶ್ರೇಯಸ್ಸಿಗಾಗಿ ಅತ್ಯವಶ್ಯವೆಂದು ಎಣಿಕೆ ಗೊಂಡಿರುವ ನಂಬಿಕೆಗಳೇ ಸಂಪ್ರದಾಯಗಳಾಗಿ ವಿಧಿ ನಿಷೇಧಗಳಾಗಿ, ಆಚರಣೆಗಳಾಗಿ ಸಾಕಾರತೆ ಪಡೆಯುತ್ತವೆ.

**೧.೭: ನಂಬಿಕೆ ಮತ್ತು ವೈಚಾರಿಕತೆ, ವಿಜ್ಞಾನ.**

ವೈಚಾರಿಕತೆ ಎಂದರೆ, ಯಾವುದಾದರೊಂದು ವಸ್ತು, ವ್ಯಕ್ತಿ ವಿಷಯವನ್ನು ಸ್ಪಷ್ಟಪಡಿಸಿಕೊಂಡು ಒಪ್ಪಿಕೊಳ್ಳುವುದು ಎಂದರ್ಥ. ವೈಚಾರಿಕತೆಯಲ್ಲಿ ಯಾವುದೇ ಪರ ವಿರೋಧಗಳು ಇರುವುದಿಲ್ಲ. ಸತ್ಯದ ಕಡೆಗೆ ಇರುವಂತದ್ದು.

ವೈಚಾರಿಕತೆ ಮತ್ತು ನಂಬಿಕೆಗಳು ಎರಡೂ ಪರಸ್ಪರ ವಿರೋಧವಾಗಿರುವ ಭಾವನೆಗಳು. ವೈಚಾರಿಕತೆಯಲ್ಲಿ ಒಂದು ವಸ್ತು ಅಥವಾ ವಿಷಯವನ್ನು ನಂಬಲೇಬೇಕಾದರೆ ಪರಿಶೀಲಿಸಿ, ಪರೀಕ್ಷಿಸಿ ಪ್ರಶ್ನಿಸಿ ಒಪ್ಪಿಕೊಳ್ಳಲಾಗುವುದು. ಆದರೆ ನಂಬಿಕೆಗಳು ತಲೆ ತಲಾಂತರದಿಂದ ಬಂದವುಗಳೆಂಬ ಕಾರಣಕ್ಕಾಗಿ ಅವುಗಳನ್ನು ಒಪ್ಪಿಕೊಂಡು ಆಚರಣೆಯಲ್ಲಿ ತರುತ್ತಾರೆ. ಜನರಲ್ಲಿ ವೈಚಾರಿಕತೆ ಬೆಳೆದಂತೆಲ್ಲಾ ಮೂಢ ನಂಬಿಕೆ, ಆಚರಣೆಗಳು ಕಡಿಮೆಯಾಗುತ್ತವೆ. ವಿಜ್ಞಾನ ಮತ್ತು ನಂಬಿಕೆಗಳು ಎರಡು ಪರಸ್ಪರ ವಿರೋಧವಾದ ಭಾವನೆಗಳು. ವಾಸ್ತವಕ್ಕೆ ವಿಜ್ಞಾನ ಬೆಂಬಲ ನೀಡಿದರೆ, ಪರಂಪರಾಗತವಾಗಿ ಮನುಷ್ಯ ಸಹಜವಾದ ಭಯ, ಮೌಢ್ಯ, ಸ್ವಾರ್ಥ, ಪಟ್ಟಭದ್ರ ಹಿತಾಸಕ್ತಿಗಳಿಂದ ತಲೆ ಎತ್ತಿದ ನಂಬಿಕೆಗಳಲ್ಲಿ ವಾಸ್ತವಕ್ಕೆ ಬೆಲೆ ಇಲ್ಲ. ಕೆಲವು ನಂಬಿಕೆಗಳಲ್ಲಿ ವೈಜ್ಞಾನಿಕ ಅಂಶ ಇಲ್ಲವೆಂದಲ್ಲ. ಆದರೆ ಒಟ್ಟಾಗಿ ಅವು ವೈಜ್ಞಾನಿಕ ಪರಿಕಲ್ಪನೆಗಳಲ್ಲಿ ಸಾಮಾಜಿಕವಾಗಿ ಇರಬಹುದು. ನಂಬಿಕೆಗಳಿಂದ ವೈಯಕ್ತಿಕ ಹಾಗೂ ಸಾಮಾಜಿಕ ಪ್ರಗತಿಗೆ ಕುಂಠಿತವಾಗುತ್ತದೆ. ಇಂತಹ ಅನರ್ಥಕ್ಕೆ ಮುಖ್ಯ ಕಾರಣವೆಂದರೆ ಜನಸಾಮಾನ್ಯರಲ್ಲ. ಸಂಪ್ರದಾಯ ಶರಣರಲ್ಲಿ ನಂಬಿಕೆಗಳನ್ನು

ಪ್ರಶ್ನಿಸುವ ಅವಶ್ಯಕತೆಯನ್ನು ಮನಗಾಣುವ ಎದೆಗಾರಿಕೆ ಮತ್ತು ಪ್ರಾಮಾಣಿಕತೆಯ ಅಭಾವ. ಪಾಶ್ಚಿಮಾತ್ಯ ವೈದ್ಯಕೀಯ ಶಾಸ್ತ್ರದ ಪ್ರಖ್ಯಾತ ಪ್ರವರ್ತಕನಾದ ಹಿಪ್ಪೊಕ್ರೇಟ್ಸ್ ನು ಕ್ರಿ.ಪೂ. ಐದನೆಯ ಶತಮಾನದಷ್ಟು ಹಿಂದೆ ಹೇಳಿದ ಧೀಮಂತ ವಚನ 'ನಿಜವಾಗಿ ಅರಿತುಕೊಳ್ಳುವುದು ವಿಜ್ಞಾನ, ಸುಮ್ಮನೆ ಅರಿತಿದ್ದೇನೆಂದು ನಂಬಿಕೊಳ್ಳುವುದೇ ಅಜ್ಞಾನ' ಎಂಬ ಮಾತು ನಮ್ಮ ಜನಪದರಿಗೆ ಮನವರಿಕೆಯಾಗಬೇಕು.

ವಿಜ್ಞಾನದ ಪ್ರಗತಿಯಾದಂತೆಲ್ಲಾ ಬಹಳಷ್ಟು ನಂಬಿಕೆಗಳು ಹಾಗೂ ಅವುಗಳನ್ನು ಆಧರಿಸಿದ ದುಷ್ಟ ಮತ್ತು ಅರ್ಥಹೀನ ಪದ್ಧತಿಗಳು ಮರೆಯಾಗುವುದು ಸಹಜ. ಉದಾ: ನಮ್ಮ ದೇಶದಲ್ಲೇ, ವೈಜ್ಞಾನಿಕ ಮುನ್ನಡೆ ಆದಂತೆಲ್ಲಾ ಕ್ರೂರ ಜಾಡ್ಯಗಳಾದ ಸಿಡುಬು, ಕಾಲರಾ, ಪ್ಲೇಗ್ ಕಾಯಿಲೆಗಳು ಅಧಿಕಶಕ್ತಿಗಳೆಂದು ನಂಬಿದ್ದನ್ನು ಬಿಡುತ್ತಿದ್ದಾರೆ. ಜನರಿಗೆ ನಂಬಿಕೆಗಳಾಗಿ ಮಾತ್ರ ಅವು ತಬ್ಬಿ ಹಿಡಿದಿದ್ದವು.

ಹಾಗಿದ್ದರೆ ವಿಜ್ಞಾನದ ಮುನ್ನಡೆ ಎಲ್ಲ ನಂಬಿಕೆಗಳ ಇತಿಶ್ರೀ ಹಾಡುತ್ತದೆ ಎಂದು ಹೇಳುವುದೇ? ಹಾಗೇನೂ ಇಲ್ಲ; ಮಾನವ ಜೀವನದಲ್ಲಿ ಸಮಾಜ ವಿಜ್ಞಾನ ಹಾಗೂ ಭೌತಿಕ ವಿಜ್ಞಾನಗಳು ಜೊತೆ ಜೊತೆಗೆ ಹೋಗಬೇಕು, ಎಂದ ಮಾತ್ರಕ್ಕೆ ಸಮಾಜ ವಿಜ್ಞಾನಗಳು ಸುಳ್ಳು ಹೇಳುತ್ತವೆ ಎಂದು ತಿಳಿಯಬಾರದು. ಸಾಮಾಜಿಕ ಅಗತ್ಯತೆ ವೈಜ್ಞಾನಿಕತೆಯನ್ನು ತನ್ನಲ್ಲಿ ಅಳವಡಿಸಿಕೊಳ್ಳುತ್ತದೆ. ಆಗ ಭೌತ ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳು ಜೊತೆ ಜೊತೆಗೆ ಹೋಗಬೇಕಾಗುತ್ತದೆ.

ನನ್ನ ದೇಶ, ನನ್ನ ಜನ, ನನ್ನ ಸಂಸ್ಕೃತಿ ಎಂಬಂಥ ನಂಬಿಕೆಗಳು ಯಾವ ಕಾಲಕ್ಕೂ ಉಳಿದಿರುತ್ತವೆ. ಆದರೆ ಅವು ಮೂಢ ಸಂಸ್ಕೃತಿಯ ಒಂಟಿ ಪರಿಕಲ್ಪನೆಗಳಾಗಿರುವುದಿಲ್ಲ; ಮಾನವ ಸಂಬಂಧಿಯಾಗಿರುತ್ತವೆ. ಅಂದರೆ ಜಗತ್ ಸಂಬಂಧಿಯಾಗಿರುತ್ತವೆ. 'ನಾ ನಿನಗಿದ್ದರೆ ನೀ ನನಗೆ' 'ನೀ ನನಗಿದ್ದರೆ ನಾ ನಿನಗೆ' ಎಂಬ ಪರಸ್ಪರ ಮಾನವ ಜಗತ್ತಿನಲ್ಲಿ ನಂಬಿಕೆ ಮತ್ತು ವೈಜ್ಞಾನಿಕ ಜೀವನ ವಿಧಾನ ಹತ್ತಿರ ಹತ್ತಿರ ಬಂದು ನಿಂತಿರುತ್ತದೆ.

# ಆಧಾರ ಗ್ರಂಥಗಳು


(೧) ಗೋಪಾಲಕೃಷ್ಣರಾವ್. ಕೆ. ಎಲ್ ೧೯೮೭. 'ಪುರಾತನ ಜಗತ್ತಿನ ಇತಿಹಾಸ'. ಬೆಂಗಳೂರು, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್.

(೨) ತಿಮ್ಮೇಗೌಡ ಎನ್. ಎಸ್ ೧೯೮೧. 'ತುಮಕೂರು ಜಿಲ್ಲೆಯ ಜಾನಪದ ನಂಬಿಕೆಗಳು', ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು.

(೩) ದಾಸೇಗೌಡ ಜಿ.ವಿ. ೧೯೭೩. 'ನಮ್ಮ ಜನಪದ ನಂಬಿಕೆಗಳು'. ಮೈಸೂರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

(೪) ನಂಜಮ್ಮಣ್ಣಿ ಎಂ.೧೯೭೪. 'ಸಾಮಾಜಿಕ ಮಾನವಶಾಸ್ತ್ರ', ಮೈಸೂರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

(೫) ಪರಮಶಿವಯ್ಯ ಜೀ.ಶಂ. ಜಾನಪದ ಸಂಪ್ರದಾಯಗಳು - ೨ (ಜಾನಪದ ಸಂಗಮ). ಮೈಸೂರು ಸಾಹಿತ್ಯ ಸದನ.

(೬) ಬಾಲಚಂದ್ರರಾವ್. ಎಸ್ ೧೯೮೯. 'ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ' ಬೆಂಗಳೂರು. ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್.

(೭) ಮಲ್ಲಿಕಾರ್ಜುನ ಲಠ್ಠೆ ೧೯೮೦. 'ಜಾನಪದ ಸಂಶೋಧನಾತ್ಮಕ ಬರಹಗಳು' ಕಲಬುರಗಿ, ಎಸ್. ಬಿ. ಪಾಟೀಲ ದಾಲಮಿಲ್.

(೮) ರಾಗೌ, ವಸಂತಕುಮಾರ್ ಎಂ.ಸಿ ೧೯೭೯. 'ಜಾನಪದ ನಂಬಿಕೆಗಳು'. ಮೈಸೂರು ಪ್ರಬುದ್ಧ ಪ್ರಕಾಶನ.

(೯) ರಾಜೇಂದ್ರ ಡಿ.ಕೆ ೧೯೭೩. 'ನಮ್ಮ ಸುತ್ತಿನ ನಂಬಿಕೆಗಳು' ಮೈಸೂರು. ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ

(೧೦) ಹನುಮಂತರಾವ್ ಜಿ.೧೯೬೦. 'ಕುಟುಂಬ ಜೀವನ', ಮೈಸೂರು. ಮೈಸೂರು ವಿಶ್ವವಿದ್ಯಾಲಯ

(೧೧) ಹಿರೇಮಲ್ಲೂರು ಈಶ್ವರನ್. ೧೯೭೨. 'ಭಾರತದ ಹಳ್ಳಿಗಳು' ಮೈಸೂರು ಪ್ರಸಾರಾಂಗ. ಮೈಸೂರು ವಿಶ್ವವಿದ್ಯಾಲಯ.

# ಮಂಟಪ ಮಾಲೆ

## ೨೪

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳಿವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಕಡಿಮೆ ಬೆಲೆಯ ಕಿರು ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ. ಜೊತೆಗೆ ನಮ್ಮ ಉದ್ದೇಶಕ್ಕೆ ಪೂರಕವಾಗಿರುವ ಪುಸ್ತಿಕೆಗಳನ್ನೂ ಈ ಮಾಲೆಯಲ್ಲಿ ಪ್ರಕಟಿಸಿ ಜನರಿಗೆ ತಲುಪಿಸುತ್ತಿದ್ದೇವೆ. ಈ ಪುಸ್ತಿಕೆ ನಿಮಗೆ ಉಪಯೋಗವಾದರೆ ನಮಗೆ ಸಂತೋಷ.

ಡಾ. ಚಂದ್ರಶೇಖರ ಕಂಬಾರ
ಕುಲಪತಿಗಳು